ಕನ್ನಡ ಭಾಷಾಭಿವೃದ್ಧಿ ಯೋಜನೆ ಮಾಲಿಕೆ-9

# ಕೆಲವು ಸಸ್ಯಗಳ ವೈಜ್ಞಾನಿಕ, ಕುಟುಂಬ, ಇಂಗ್ಲಿಷ್ ಹಾಗೂ ಕನ್ನಡ ಹೆಸರುಗಳು

ಎಸ್.ಜಿ.ನರಸಿಂಹಾಚಾರ್




ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು
ಹಾಗೂ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು



ಕನ್ನಡ ಭಾಷಾಭಿವೃದ್ಧಿ ಯೋಜನೆ ಮಾಲಿಕೆ–9

# ಕೆಲವು ಸಸ್ಯಗಳ ವೈಜ್ಞಾನಿಕ, ಕುಟುಂಬ, ಇಂಗ್ಲಿಷ್ ಹಾಗೂ ಕನ್ನಡ ಹೆಸರುಗಳು

ಎಸ್.ಜಿ.ನರಸಿಂಹಾಚಾರ್

ಪರಿಷ್ಕರಣೆ

ಡಾ॥ ಎ.ಎನ್.ಶೃಂಗೇಶ್ವರ




ಕನ್ನಡ ಅಧ್ಯಯನ ವಿಭಾಗ, ಶಿಕ್ಷಣ ನಿರ್ದೇಶನಾಲಯ
ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.

**ಕೆಲವು ಸಸ್ಯಗಳ ವೈಜ್ಞಾನಿಕ, ಕುಟುಂಬ, ಇಂಗ್ಲಿಷ್ ಹಾಗೂ ಕನ್ನಡ ಹೆಸರುಗಳು:**
ಲೇಖಕರು: ಎಸ್.ಜಿ. ನರಸಿಂಹಾಚಾರ್; ಪರಿಷ್ಕರಣೆ: ಡಾ.ಎ.ಎನ್.ಶೃಂಗೇಶ್ವರ. ಪ್ರಕಾಶಕರು: ಕನ್ನಡ ಅಧ್ಯಯನ ವಿಭಾಗ, ಶಿಕ್ಷಣ ನಿರ್ದೇಶನಾಲಯ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು–560065.

ಪರಿಷ್ಕೃತ ಆವೃತ್ತಿ : 2015 ಪುಟಗಳು: Xviii+238
ಪ್ರತಿಗಳು : 500 ಬೆಲೆ : ರೂ.100–00

**Scientific, Family, English and Kannada Names of few Plants:**
Compiled by: S.G. Narasimhachar; Revised by Dr.A.N.Shrungeshwara. Published by Department of Kannada Studies, Directorate of Education, UAS, Bangalore-560065.

Revised Edition : 2015 Pages : Xviii+238
Copies : 500 Price : Rs.100-00

ISBN : 978-8-19222-536-4



*ಸಂಪಾದಕರು*
**ಡಾ. ಜೆ. ಬಾಲಕೃಷ್ಣ**
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು

*ಮುಖಪುಟ ವಿನ್ಯಾಸ*
**ಡಾ. ಜೆ.ಬಿ.**

ಮುದ್ರಣ
**ರಘು ಪ್ರಿಂಟ್ ಸಿಸ್ಟಮ್ಸ್**
94480 04297

ಸಿದ್ದರಾಮಯ್ಯ
ಮುಖ್ಯಮಂತ್ರಿಗಳು




ಕರ್ನಾಟಕ ಸರ್ಕಾರ
ಬೆಂಗಳೂರು–560001
ದಿನಾಂಕ: 11–06–2013

# ಶುಭ ಸಂದೇಶ

ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯವು ಕನ್ನಡ ಭಾಷಾಭಿವೃದ್ಧಿ ಯೋಜನೆ ಮಾಲಿಕೆಯಡಿಯಲ್ಲಿ ಕನ್ನಡದಲ್ಲಿ ಕೃಷಿ ಸಂಬಂಧಿತ ಪುಸ್ತಕಗಳನ್ನು ಹೊರತರುತ್ತಿರುವುದು ಔಚಿತ್ಯ ಪೂರ್ಣವಾದುದು. ಅದರಂತೆ ಕನ್ನಡ ಭಾಷೆ ತನ್ನ ಭಾಷಿಕ, ಸಾಂಸ್ಕೃತಿಕ, ಸಾಹಿತ್ಯಕ ಅನನ್ಯತೆಯಿಂದ ಜಾಗತಿಕ ಮಟ್ಟದಲ್ಲಿ ತನ್ನದೇ ಆದ ಛಾಪು ಮೂಡಿಸಿದೆ. ಈ ಬೆಳವಣಿಗೆಗೆ ಕನ್ನಡದ ಅಸಂಖ್ಯಾತ ಲೇಖಕರು, ಕಲಾವಿದರು, ಕೃಷಿ ವಿಜ್ಞಾನ ಲೇಖಕರೂ ಕಾರಣರಾಗಿದ್ದಾರೆ. ಭಾಷಾ ಶ್ರೀಮಂತಿಕೆ, ಪ್ರಾಚೀನತೆ, ಸೃಜನಶೀಲ ಹಾಗೂ ಪ್ರೌಢಿಮೆಯನ್ನು ಹೊಂದಿರುವ ಕನ್ನಡ ಭಾಷೆಗೆ ವೈವಿಧ್ಯಪೂರ್ಣವಾದ ಒಂದು ದೊಡ್ಡ ಪರಂಪರೆಯೇ ಇದೆ. ಈ ಭಾಷೆಯನ್ನು ಇನ್ನೂ ಅರ್ಥಪೂರ್ಣವಾಗಿ ದೈನಂದಿನ ಸಂವಹನ ಭಾಷೆಯಾಗಿ, ವಿಜ್ಞಾನದ ಭಾಷೆಯಾಗಿ ಹಾಗೂ ವ್ಯವಹಾರಿಕ ಭಾಷೆಯಾಗಿ ಬಳಸುವ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ. ಕನ್ನಡ ಕಟ್ಟುವ ಮಹತ್ವದ ಕೈಂಕರ್ಯಕ್ಕೆ ನಾವೆಲ್ಲರೂ ಕೈಜೋಡಿಸಬೇಕಾಗಿದೆ.

ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ, ಜಾನಪದ, ದೇಸಿಕಲೆ, ಮಾನವಿಕ ವಿಜ್ಞಾನ ಇವುಗಳನ್ನು ಗುಣಾತ್ಮಕವಾಗಿ, ಶಾಸ್ತ್ರೀಯವಾಗಿ, ಸಂಖ್ಯಾತ್ಮಕವಾಗಿ, ಸಾಂಸ್ಕೃತಿಕವಾಗಿ, ಐತಿಹಾಸಿಕವಾಗಿ ಅಧ್ಯಯನಕ್ಕೆ ಒಳಪಡಿಸುವುದು ಹಾಗೂ ಈ ಬಗ್ಗೆ ಸಂಶೋಧನೆ ಮಾಡಿ ಗ್ರಂಥರೂಪ, ಡಿಜಿಟಲ್ ರೂಪ, ದೃಶ್ಯ ಮಾಧ್ಯಮ ಹಾಗೂ ಅಂತರ್ಜಾಲಕ್ಕೆ ಅಳವಡಿಸಿ ನವ ಸಂಶೋಧಕರಿಗೆ, ಶಾಸ್ತ್ರಜ್ಞರಿಗೆ, ಶೈಕ್ಷಣಿಕರಿಗೆ, ವಿದ್ಯಾರ್ಥಿಗಳಿಗೆ, ಕಲಾವಿದರಿಗೆ ಹಾಗೂ ರೈತರಿಗೆ ಒದಗಿಸುವಂತಾಗಬೇಕು. ಪಾರಂಪರಿಕ ದೇಶಿಯ ಜ್ಞಾನ–ವಿಜ್ಞಾನಗಳ ಆರೋಗ್ಯಕರ ಚಿಂತನೆಗೆ; ಅನ್ಯ ಶಿಸ್ತುಗಳ ಜ್ಞಾನಾರ್ಜನೆಗೆ ಪ್ರಕಟಣೆಗಳಿಗೆ, ಸಂವಾದಗಳಿಗೆ ಸೂಕ್ತ ವೇದಿಕೆಯನ್ನು ನಿರ್ಮಿಸಿಕೊಡುತ್ತದೆ.

ಈ ಹಿನ್ನೆಲೆಯಲ್ಲಿ ಕನ್ನಡ ಭಾಷಾಭಿವೃದ್ಧಿ ಯೋಜನೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ವಿಶ್ವವಿದ್ಯಾನಿಲಯಗಳಿಗೆ ನಮ್ಮ ಸರ್ಕಾರ ವಿಶೇಷ ಅನುದಾನವನ್ನು ಮೀಸಲಿರಿಸಿದೆ. ಅಲ್ಲದೆ ಈಗಾಗಲೇ 25 ಲಕ್ಷ ರೂ.ಗಳನ್ನು ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯಕ್ಕೆ ಬಿಡುಗಡೆ ಮಾಡುವ ಮೂಲಕ ಕೃಷಿ ಸಾಹಿತ್ಯ ಪ್ರಕಟಣೆಗೆ ಒತ್ತು ನೀಡಿದೆ. ಈ ಮೊತ್ತವನ್ನು ಕೃಷಿ ಸಾಹಿತ್ಯ ಪ್ರಕಟಣೆಯ ಅನುಷ್ಠಾನಕ್ಕೆ ಬಳಕೆ ಮಾಡುವ

**ಉಮಾಶ್ರೀ**
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ
ವಿಕಲಚೇತನರ, ಹಿರಿಯ ನಾಗರಿಕರ
ಸಬಲೀಕರಣ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು




ಕರ್ನಾಟಕ ಸರ್ಕಾರ
ಬೆಂಗಳೂರು–560001
ದಿನಾಂಕ: 4–6–2013

# ಶುಭಾಕಾಂಕ್ಷೆ

ಕನ್ನಡ ನಾಡು–ನುಡಿಗೆ ಸುದೀರ್ಘವಾದ ಇತಿಹಾಸವಿದೆ. ಅಂತೆಯೇ ಭವ್ಯ ಪರಂಪರೆಯನ್ನು ಸಹ ಹೊಂದಿರುತ್ತದೆ. ಭಾರತೀಯ ಪ್ರಾದೇಶಿಕ ಭಾಷೆಗಳಲ್ಲಿಯೇ ಅತಿ ಹೆಚ್ಚು ಜ್ಞಾನಪೀಠ ಪ್ರಶಸ್ತಿಗಳನ್ನು ಪಡೆದಿರುವ ಹೆಗ್ಗಳಿಕೆಗೆ ಕನ್ನಡ ಭಾಷೆ ಪಾತ್ರವಾಗಿದೆ. ಈ ನಾಡಿನ ಕೃಷಿ ವಿಜ್ಞಾನಿಗಳು, ಸಾಹಿತಿಗಳು, ಲೇಖಕರು, ಸಂಶೋಧಕರು, ಕಲಾವಿದರು, ಶಿಕ್ಷಣ ತಜ್ಞರು ಜಗತ್ತಿನಾದ್ಯಂತ ಉನ್ನತ ಸಾಧನೆಗೈದಿರುವುದು ಅಭಿನಂದನಾರ್ಹ.

ತ್ಯಂತ ಪ್ರಾಚೀನವಾದ ಕನ್ನಡ ನಾಡು–ನುಡಿಗೆ ಸಂಬಂಧಪಟ್ಟ ವ್ಯಾಖ್ಯಾನಗಳು ರಾಮಾಯಣ ಮಹಾಭಾರತಗಳಂತಹ ಆದಿ ಗ್ರಂಥಗಳಲ್ಲಿ ಕಂಡುಬರುತ್ತವೆ. ಕ್ರಿಸ್ತಶಕ ಕ್ಕಿಂತಲೂ ಪೂರ್ವದಿಂದಲೇ ಕನ್ನಡ ಭಾಷೆಯ ಅಸ್ತಿತ್ವವನ್ನು ಸಂಶೋಧಕರು ಗುರುತಿಸಿದ್ದಾರೆ. ಕ್ರಿ.ಶ. 450ರ ಹಲ್ಮಿಡಿ ಶಾಸನ ಕನ್ನಡದ ಮೊದಲ ಲಿಖಿತ ರೂಪದ ದಾಖಲೆಯಾಗಿದೆ. ಕನ್ನಡದ ಆದಿ ಮಹಾಕವಿ ಪಂಪನಿಗಿಂತ ಹಿಂದೆಯೇ ಒಂದು ಸಮೃದ್ಧವಾದ ಸಾಹಿತ್ಯ ಪರಂಪರೆಯನ್ನು ಕನ್ನಡ ಕಂಡಿದೆ ಎಂಬುದಕ್ಕೆ ಸಂಶೋಧಕರು ಸಾಕಷ್ಟು ಪುರಾವೆಗಳನ್ನು ನೀಡಿದ್ದಾರೆ. ಶಾತವಾಹನರು, ಕದಂಬರು, ಚಾಲುಕ್ಯರು, ಗಂಗರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರು ಅರಸರು ಈ ನಾಡಿನ ಕಲೆ, ಸಾಹಿತ್ಯ, ವಾಸ್ತುಶಿಲ್ಪ, ಸಂಗೀತ ಮೊದಲಾದ ಕ್ಷೇತ್ರಗಳಿಗೆ ಅಪೂರ್ವ ಕೊಡುಗೆ ನೀಡಿದ್ದಾರೆ.

ಇಂತಹ ಅಪೂರ್ವ ಪರಂಪರೆ ಹೊಂದಿರುವ ಕನ್ನಡ ಭಾಷೆಯನ್ನು ಕೇಂದ್ರ ಸರ್ಕಾರ ಶಾಸ್ತ್ರೀಯ ಭಾಷೆ ಎಂದು ಘೋಷಿಸಿರುವುದು ಸಂತೋಷದ ಸಂಗತಿಯಾಗಿದೆ. ಜನರಲ್ಲಿ ಕ್ರಿಯಾಶೀಲತೆ ಮತ್ತು ದೇಸಿತನವನ್ನು ಅಭಿವೃದ್ಧಿಪಡಿಸುವಂಥ ವಿಷಯ ವಸ್ತುಗಳ ಪ್ರಕಟಣೆಗಳಿಗೆ ಇಲ್ಲಿ ಆದ್ಯತೆ ನೀಡಲಾಗುತ್ತಿದೆ. ಮಾನಾವಾಭಿವೃದ್ಧಿಯ ದಿಕ್ಕಿನಲ್ಲಿ ರಚನಾತ್ಮಕ ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೆ ತರುವುದು ಹಾಗೂ ಅಂಥ ರಚನಾತ್ಮಕ ಕ್ಷೇತ್ರಗಳಲ್ಲಿ ತೊಡಗಿಸಿ ಹೊಸ ಹೊಸ ಹೊಳಹುಗಳನ್ನು ಕೊಡುವ ಸಂಶೋಧಕರನ್ನು, ಲೇಖಕರನ್ನು ಗುರುತಿಸಿ ಕೃತಿಗಳನ್ನು ಬರೆಸಿ ಪ್ರಕಟಿಸುತ್ತಿರುವುದು ಔಚಿತ್ಯಪೂರ್ಣವಾದುದು.

ಡಾ॥ ಶಾಲಿನಿ ರಜನೀಶ್, ಭಾ.ಆ.ಸೇ.
ಸರ್ಕಾರದ ಪ್ರಧಾನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ ಹಾಗೂ
ವಾರ್ತಾ ಇಲಾಖೆ




ನಂ: 2, ನೆಲಮಹಡಿ, ವಿಕಾಸ ಸೌಧ
ಬೆಂಗಳೂರು-560001
ದಿನಾಂಕ: 17-6-2014

# ಶುಭ ಹಾರೈಕೆ

ದ್ರಾವಿಡ ಭಾಷಾ ಪರಂಪರೆಯ ನಡುವೆ ಕನ್ನಡ ಭಾಷೆಯ ಶ್ರೀಮಂತಿಕೆ ಮತ್ತು ಅದರ ಸಾಂಸ್ಕೃತಿಕ ವೈವಿಧ್ಯತೆ ಸುಂದರಮಯವಾಗಿದೆ. ತಮಿಳು ಭಾಷೆಯ ಪರಂಪರೆಗೆ ಸರಿಸಮಾನವಾಗಿ ಬೆಳೆದು ಬಂದಿರುವ ಕನ್ನಡಕ್ಕೆ ನಿಖರವಾಗಿಯೇ ಒಂದೂವರೆ ಸಾವಿರ ವರ್ಷಗಳಿಗೂ ಮೀರಿದ ಇತಿಹಾಸವಿದೆ. ಕ್ರಿ.ಶ. 450ರ ಹಲ್ಮಿಡಿ ಶಾಸನದ ಕಾಲಕ್ಕೆ ಕನ್ನಡ, ಕರ್ನಾಟಕದಲ್ಲಿ ಬಳಕೆಯಲ್ಲಿತ್ತು. ವ್ಯಾಸಕೃತ ಮಹಾಭಾರತದಲ್ಲಿಯೇ ಕರ್ನಾಟಕದ ಪ್ರಸ್ತಾಪವಿದೆ. ಶಾತವಾಹನರು, ಕದಂಬರು ಇಲ್ಲಿನ ಪ್ರಾಚೀನ ಅರಸು ಮನೆತನದವರೆಂದು ಇತಿಹಾಸಕಾರರು ಗುರುತಿಸಿರುತ್ತಾರೆ. ಗ್ರೀಕ್ ಭೂಗೋಳಶಾಸ್ತ್ರದ ಟಾಲೆಮಿಯ ಪ್ರವಾಸಿ ಬರವಣಿಗೆಯಲ್ಲಿಯೇ ಕನ್ನಡ ನಾಡಿನ ಅನೇಕ ಪ್ರದೇಶಗಳ ಪ್ರಸ್ತಾಪ ಇರುವುದನ್ನು ಸಂಶೋಧಕ ಗೋವಿಂದ ಪೈ ಅವರು ಬೆಳಕಿಗೆ ತಂದರು. ಅಶೋಕನು ದಕ್ಷಿಣ ಭಾರತದಲ್ಲಿ ಹಾಕಿಸಿದ ಶಾಸನಗಳು ಮೊದಲು ದೊರೆತಿರುವುದು ಕರ್ನಾಟಕದಲ್ಲಿಯೇ. ಚಿತ್ರದುರ್ಗದ ಸಿದ್ಧಾಪುರ, ರಾಯಚೂರಿನ ಮಸ್ಕಿ ಭಾಗದಲ್ಲಿ ದೊರಕಿರುವ ಶಾಸನದಿಂದಲೇ ಅಶೋಕನಿಗೆ 'ದೇವನಾಂಪ್ರಿಯ'ಎಂಬ ಬಿರುದು ಇದ್ದಿತೆಂದು ತಿಳಿದು ಬರುತ್ತದೆ. ಅಶೋಕನು ದಕ್ಷಿಣ ಭಾರತದ ಕರ್ನಾಟಕದಲ್ಲಿ ತನ್ನ ಶಾಸನಗಳನ್ನು ಹಾಕಿಸಿದನೆಂದರೆ ಕರ್ನಾಟಕದಲ್ಲಿಯ ಭಾಷಾ ಪ್ರದೇಶಗಳು ಚೆನ್ನಾಗಿಯೇ ನೆಲೆಯೂರಿದ್ದವೆಂದು ತಿಳಿಯಬಹುದಾಗಿರುತ್ತದೆ. ಇಷ್ಟೇ ಅಲ್ಲದೆ ಕಾಳಿದಾಸನ ಕಾಲ ನಿಗದಿ ಮಾಡುವುದರಲ್ಲಿಯೂ ಮೊದಲು ಸಹಾಯಕ್ಕೆ ಬಂದದ್ದು ಕರ್ನಾಟಕದ ಐಹೊಳೆಯ ಮೇಗುತಿ ದೇವಾಲಯದ ರವಿಕೀರ್ತಿಯ 5ನೆಯ ಶತಮಾನದ ಶಾಸನ 'ಅಯ್ಯೋ ಹೊಳೆಯ' ಐನೂರು ಜನ ವ್ಯಾಪಾರಸ್ಥರು ದಕ್ಷಿಣ ಭಾರತದ ವ್ಯಾಪಾರವನ್ನೆಲ್ಲಾ ನಿಯಂತ್ರಿಸುತ್ತಿದ್ದರಂತೆ. ಅಂದರೆ ಭಾರತದ ಇತಿಹಾಸಕ್ಕೆ ತನ್ನದೇ ಆದ ಕಾಣಿಕೆ ನೀಡಿದ ಕರ್ನಾಟಕದ ಸಾಂಸ್ಕೃತಿಕ ಭವ್ಯ ಪರಂಪರೆಗೆ ಶಾಸ್ತ್ರೀಯ ಸ್ಥಾನಮಾನವನ್ನು ನೀಡಿರುವುದು ಎಲ್ಲಾ ರೀತಿಯಿಂದಲೂ ಸಮಂಜಸ ಹಾಗೂ ಸೂಕ್ತವಾಗಿದೆ. ಕನ್ನಡ ಸರ್ವಾಂಗೀಣ ಅಭಿವೃದ್ಧಿಗಾಗಿ ಕರ್ನಾಟಕ ಸರ್ಕಾರವು 11 ವಿಶ್ವವಿದ್ಯಾಲಯಗಳ ಕನ್ನಡ ವಿಭಾಗಗಳಿಗೆ ತಲಾ ರೂ. 1.00 ಕೋಟಿ ಅನುದಾನವನ್ನು ಬಿಡುಗಡೆ ಮಾಡಿರುವುದರಿಂದ ವಿಶ್ವವಿದ್ಯಾಲಯದ ಕನ್ನಡ ವಿಭಾಗಗಳು ಕನ್ನಡ ಸಾಹಿತ್ಯ ಪರಂಪರೆ ಕುರಿತಾಗಿ ಅನೇಕ ಸಂಶೋಧನ ಯೋಜನೆಗಳನ್ನು ಕೈಗೆತ್ತಿಕೊಂಡಿರುತ್ತವೆ.

ರಾಜ್ಯ ಸರ್ಕಾರದ ಈ ಯೋಜನೆ ಕನ್ನಡ ನಾಡು–ನುಡಿ ಸಂಸ್ಕೃತಿಯ ಪುನರುತ್ಥಾನಕ್ಕೆ ಕಾರಣವಾಗಿದೆ. ಈ ಮೂಲಕ ವಿವಿಧ ಜ್ಞಾನ ಶಿಸ್ತುಗಳಲ್ಲಿ ಕನ್ನಡಿಗರ ಅಧ್ಯಯನ ಆಸಕ್ತಿ ಬೆಳೆಯಲು ವಿವಿಧ ಕ್ರಿಯಾ ಯೋಜನೆಗಳು ಸಹಕಾರಿಯಾಗಿವೆ. ಇದರಿಂದ ಹೊಸ ಚೈತನ್ಯವನ್ನು ಹುಟ್ಟುಹಾಕುವ ಹೊಸ ಸಂಚಲನವನ್ನು ಉಂಟುಮಾಡುವ ಅನನ್ಯ ಪರಂಪರೆಯೊಂದಕ್ಕೆ ಚಾಲನೆ ಸಿಕ್ಕಂತಾಗಿದೆ.

ಇಂತಹ ಕನ್ನಡದ ಕೆಲಸಕ್ಕೆ ಕೈಜೋಡಿಸಿರುವ ಕರ್ನಾಟಕ ರಾಜ್ಯ ಸರ್ಕಾರ ಕನ್ನಡ ಭಾಷಾಭಿವೃದ್ಧಿ ಯೋಜನೆಗೆ ವಿಶೇಷ ಅನುದಾನ ಬಿಡುಗಡೆ ಮಾಡಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ವಿವಿಧ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ಕಟ್ಟುವ ಕೆಲಸ ಭರದಿಂದ ನಡೆದಿದೆ. ಕನ್ನಡದ ಇತಿಹಾಸ, ಭಾಷೆ, ಸಾಹಿತ್ಯ ಪರಂಪರೆ, ಕೃಷಿ ವಿಜ್ಞಾನ ಸಾಹಿತ್ಯ, ಕೃಷಿ ಸಂಶೋಧನಾ ಕೃತಿ, ಜಾನಪದ, ವಿಜ್ಞಾನ, ಇನ್ನಿತರ ಅಂಶಗಳನ್ನು ಕುರಿತ ಕನ್ನಡದ ಹೊತ್ತಗೆಗಳು ಸಿದ್ಧವಾಗುತ್ತಿವೆ. ಅದರಂತೆ ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯವು ಕೃಷಿ ಸಂಶೋಧನಾ ಗ್ರಂಥಗಳು ಹಾಗೂ ರೈತರಿಗೆ ನೂತನ ಕೃಷಿ ತಂತ್ರಜ್ಞಾನಗಳ ಪುಸ್ತಕಗಳ ಪ್ರಕಟಣೆಗಳನ್ನು ಹೊರತಂದು ಜನಪ್ರಿಯಗೊಳಿಸುವ ನಿಟ್ಟಿನಲ್ಲಿ ಮೇಲ್ಪಂಕ್ತಿ ಹಾಕಿಕೊಟ್ಟಿದೆ. ಇದಕ್ಕಾಗಿ ಶ್ರಮಿಸಿದ ಪ್ರಧಾನ ಸಂಪಾದಕರು, ಸಂಪಾದಕ ಸಮಿತಿ ಹಾಗೂ ಈ ಕಾರ್ಯದಲ್ಲಿ ನೆರವಾದ ಎಲ್ಲರನ್ನೂ ಅಭಿನಂದಿಸುತ್ತೇನೆ. ಈ ಕೃತಿಗಳು ನಾಡಿನ ಎಲ್ಲರಿಗೂ ತಲುಪಲೆಂದು ಹಾರೈಸಿ ಶುಭಕೋರುತ್ತೇನೆ.

(ಉಮಾಶ್ರೀ)

**ಕೆ.ಎ. ದಯಾನಂದ, ಕ.ಆ.ಸೇ.**
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ




ಕನ್ನಡ ಭವನ, ಜೆ.ಸಿ. ರಸ್ತೆ,
ಬೆಂಗಳೂರು–560002
ದಿನಾಂಕ: 1–7–2014

# ನಲ್ನುಡಿ

'ನೇಗಿಲಕುಳದೊಳಗಡಗಿದೆ' ಕರ್ಮ ನೇಗಿಲು ಮೇಲೆಯೇ ನಿಂತಿದೆ ಧರ್ಮ' ರಾಷ್ಟ್ರಕವಿ ಕೆ.ವಿ. ಪುಟ್ಟಪ್ಪನವರ ರೈತ ಗೀತೆಯ ಈ ಸಾಲುಗಳು ದೇಶದ ಅನ್ನಮೂಲ ಹಾಗೂ ಅಭಿವೃದ್ಧಿ ಮೂಲದ ನೆಲೆ ಎಂಬುದನ್ನು ಒತ್ತಿ ಹೇಳುತ್ತಿವೆ. ಭಾರತದ ಬೆನ್ನೆಲುಬು ರೈತನೆಂದು ಘೋಷಿಸಿಕೊಂಡು, ರೈತನನ್ನು–ಕೃಷಿಯನ್ನು ಉನ್ನತೀಕರಿಸಲು ಅನೇಕ ಮಾರ್ಗಗಳನ್ನು ಕ್ರಮಿಸಿದ್ದೇವೆ. ಹೊಸ ಮಾರ್ಗಗಳನ್ನು ಯೋಜಿಸುತ್ತಿದ್ದೇವೆ. ಇದಕ್ಕೆ ಕಾರಣ ಕೃಷಿ ದೇಶದ ಪ್ರಮುಖವಾದ ಆದಾಯ ಮೂಲವಾಗಿದೆ. ದೇಶದ ಬಹುತೇಕ ಜನರು ಈ ವೃತ್ತಿಯನ್ನೇ ಅವಲಂಬಿಸಿದ್ದಾರೆ. ಆಧುನಿಕತೆ ಹಾಗೂ ವೈಜ್ಞಾನಿಕತೆಗಳು ನಮ್ಮ ಬದುಕಿನಲ್ಲಿ ಐಚ್ಛಿಕತೆಗಳನ್ನು ಹೆಚ್ಚಿಸಿ, ಕೃಷಿ ಕರ್ಮವನ್ನು ಅಲಕ್ಷಿಸುವಂತೆ ಮಾಡಿವೆ. ಅಭಿವೃದ್ಧಿ ಪಥದ ರಾಷ್ಟ್ರಗಳು ತಮ್ಮ ಪ್ರತಿ ಆರ್ಥಿಕ ಚಟುವಟಿಕೆಗಳನ್ನು ಸಮಕಾಲೀನ ನೆಲೆಯಲ್ಲಿ ಒದಗಿಬರುವ ಹೊಸತನಗಳ ಜೊತೆ ಲಗ್ನಗೊಂಡು ಬೆಳೆಯುತ್ತಾ ದೇಶದ ಅಭಿವೃದ್ಧಿಗೆ ನೆರವಾಗುವುದು ಅಗತ್ಯ. ಪ್ರಸ್ತುತ ದಿನಗಳಲ್ಲಿ ಗ್ರಾಮೀಣ ಯುವಕರೂ ಸಹ ಹೆಚ್ಚಿನ ವಿದ್ಯಾಭ್ಯಾಸವಿಲ್ಲದಿದ್ದರೂ ಪಟ್ಟಣದ ಬದುಕನ್ನು ಆಯ್ದುಕೊಳ್ಳುವುದು ಒಂದು ರೀತಿಯಲ್ಲಿ ಭಾರತದ ಕೃಷಿ ಸಂಬಂಧಿತ ಸಂಪನ್ಮೂಲವು ವ್ಯವಸ್ಥಿತ ರೀತಿಯಲ್ಲಿ ಪ್ರಯೋಜನವಾಗುತ್ತಿಲ್ಲ. ಇವರನ್ನು ಗ್ರಾಮೀಣ ಕೃಷಿನೆಲೆಯಲ್ಲಿ ಸ್ವಾವಲಂಬಿಗಳನ್ನಾಗಿ ಮಾಡುವುದು ನಾಡಿನ ಹಲವು ಅಗತ್ಯಗಳಲ್ಲಿ ಒಂದಾಗಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ನಮ್ಮ ದೇಶದ ಆಹಾರ ಅಭಾವವನ್ನು ನೀಗಿಸಲು ಪರದೇಶಗಳಿಂದ ಗೋಧಿ, ಮೆಕ್ಕೆಜೋಳ ಮುಂತಾದ ಆಹಾರ ಧಾನ್ಯಗಳನ್ನು ಆಮದು ಮಾಡಿಕೊಳ್ಳುವ ಮೂಲಕ ಜನರ ಹಸಿವು ನೀಗಿಸಬೇಕಾಗಿತ್ತು. ಈ ಪರಿಸ್ಥಿತಿಯನ್ನು ಎದುರಿಸಿ ಕಂಗೆಟ್ಟ ರೈತರು ಹಾಗೂ ವಿಜ್ಞಾನಿಗಳು ಸುಧಾರಿತ ಬೇಸಾಯ ಪದ್ಧತಿಗಳು ಹಾಗೂ ತಳಿ ಸಂವರ್ಧನೆಗೆ ಹೆಚ್ಚಿನ ಪ್ರಾಶ್ಯಸ್ತವನ್ನು ನೀಡುತ್ತಾ ಬಂದರು. ನವೀನ ತಂತ್ರಜ್ಞಾನವನ್ನು ಬಳಸಿಕೊಳ್ಳುವಲ್ಲಿ ದೇಶ ದಿಟ್ಟ ಹೆಜ್ಜೆ ಇಟ್ಟ ಪರಿಣಾಮವಾಗಿ ನಮ್ಮ ದೇಶದಲ್ಲಿ 1960ರ ದಶಕದಲ್ಲಿ ಹಸುರು ಕ್ರಾಂತಿ ಸಂಭವಿಸಿತು. ತರುವಾಯದಲ್ಲಿ ಹಳದಿಕ್ರಾಂತಿ (ಖಾದ್ಯ ತೈಲ ಉತ್ಪಾದನೆ), ಶ್ವೇತ ಕ್ರಾಂತಿ (ಹೈನುಗಾರಿಕೆ), ನೀಲಿಕ್ರಾಂತಿ (ಮತ್ಸ್ಯಗಾರಿಕೆ) ಇತ್ಯಾದಿ ಕ್ರಾಂತಿಗಳಿಗೆ ಇದು ನಾಂದಿಯಾಯಿತು. ಇಂದು ಕೆಲವು ವಿದ್ಯಾವಂತರು ಸಾವಯವ ಕೃಷಿಯತ್ತ ಮುಖಮಾಡಿ ಪ್ರಯೋಗಶೀಲ ರೈತರು ಎಂಬ ಹೆಸರನ್ನು ಪಡೆದು ಹೆಚ್ಚು ಇಳುವರಿ ಪಡೆಯುತ್ತಿದ್ದಾರೆ ಎಂಬುದು ಸಮಾಧಾನಕರ ಸಂಗತಿ. ಈ

ಕೃಷಿ ಸಾಹಿತ್ಯಕ್ಕೆ ತನ್ನದೇ ಆದ ಇತಿಹಾಸವಿದೆ. ಕೃಷಿ ತಂತ್ರಜ್ಞಾನಗಳು, ವೈಜ್ಞಾನಿಕ ಪ್ರಬಂಧಗಳು, ಹವಾಮಾನ, ಪರಿಸರ, ಜೀವಸಂಕುಲಗಳ ಕುರಿತಾದ ಹಲವು ಪುಸ್ತಕಗಳು ಈಗಾಗಲೇ ಪ್ರಕಟಗೊಂಡಿವೆ. ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ಕೃಷಿ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಪಾರಿಭಾಷಿಕ ಪದಕೋಶ ಹೊರತಂದಿರುವುದು ಹೆಮ್ಮೆಯ ವಿಷಯವಾಗಿದೆ. ಆದಾಗ್ಯೂ ಕೃಷಿ ಸಾಹಿತ್ಯದ ವ್ಯಾಪ್ತಿ ಇನ್ನು ಹೆಚ್ಚು ವಿಸ್ತಾರವಾಗಬೇಕಾಗಿದೆ. ಈ ನಿಟ್ಟಿನಲ್ಲಿ ಪ್ರಸ್ತುತ ಅನುದಾನ ಕೃಷಿ ಸಾಹಿತ್ಯ ಓದುಗರ ಹಾಗೂ ಬರಹಗಾರರನ್ನು ಪ್ರೋತ್ಸಾಹಿಸಲು ನೆರವಾಗಲಿದೆ ಎಂಬುದು ನಮ್ಮೆಲ್ಲರ ಆಶಯವಾಗಿದೆ.

ಈ ಕಾರ್ಯಕ್ರಮದಡಿಯಲ್ಲಿ ಕೃಷಿ ವಿಜ್ಞಾನ ಸಾಹಿತ್ಯದಲ್ಲಿ ವಿಷಯವಾರು ಗ್ರಂಥಗಳ ಪ್ರಕಟಣೆ ಕೈಗೊಳ್ಳುವ ಮೂಲಕ ಉಪಯುಕ್ತವಾದ ರೀತಿಯಲ್ಲಿ ಗ್ರಂಥಗಳನ್ನು ಸಂಪಾದಿಸಿರುವ ಸಂಪಾದಕರು, ಸಂಪಾದಕ ಸಮಿತಿಯನ್ನು, ಯೋಜನೆಯ ರೂಪುರೇಷೆಗಳನ್ನು ಸಿದ್ಧಪಡಿಸಿರುವ ಸಂಚಾಲಕರನ್ನೂ, ಕುಲಪತಿಯವರನ್ನೂ ಹಾಗೂ ಕುಲಸಚಿವರನ್ನೂ ನಾನು ಕರ್ನಾಟಕ ಸರ್ಕಾರದ ಪರವಾಗಿ ಅಭಿನಂದಿಸುತ್ತೇನೆ.

(ಡಾ|| ಶಾಲಿನಿ ರಜನೀಶ್)

ಡಾ॥ ಎಚ್. ಶಿವಣ್ಣ
ಕುಲಪತಿಗಳು




ಗಾಂಧಿ ಕೃಷಿ ವಿಜ್ಞಾನ ಕೇಂದ್ರ,
ಕೃಷಿ ವಿಶ್ವವಿದ್ಯಾನಿಲಯ,
ಬೆಂಗಳೂರು–560065

# ಕುಲಪತಿಗಳ ಹಾರೈಕೆ

ಕೃಷಿ ವಿಶ್ವವಿದ್ಯಾನಿಲಯವು ಬೋಧನೆ, ಸಂಶೋಧನೆ ಹಾಗೂ ವಿಸ್ತರಣೆಯ ಮೂರು ಕಾರ್ಯಚಟುವಟಿಕೆಗಳನ್ನು ಹೊಂದಿದ್ದು ಅವುಗಳಿಗೆ ಸಂಬಂಧಿಸಿದ ಅಗತ್ಯ ವಿಷಯಗಳನ್ನು ಪ್ರಕಟಿಸುವ ಜವಾಬ್ದಾರಿಯನ್ನು ಹೊಂದಿದೆ. ಕೃಷಿ ಕ್ಷೇತ್ರದ ಸಂಶೋಧನಾ ತಾಂತ್ರಿಕ ಜ್ಞಾನ ಹಾಗೂ ಸಂಬಂಧಿತ ಸಾಹಿತ್ಯವು ಸದ್ಬಳಕೆಯಾಗಬೇಕಾದರೆ ಅದು ಪ್ರಾದೇಶಿಕ ಭಾಷೆಯಲ್ಲಿ ಸಂಬಂಧಪಟ್ಟ ರೈತರಿಗೆ, ಅಧಿಕಾರಿಗಳಿಗೆ ಹಾಗೂ ವಿಸ್ತರಣಾ ಕಾರ್ಯಕರ್ತರಿಗೆ ಲಭ್ಯವಾಗಬೇಕಾಗುತ್ತದೆ. ಇಂಥ ಕಾರ್ಯವನ್ನು ಸಾಕಾರಗೊಳಿಸುವ ಉದ್ದೇಶದಿಂದ ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯವು ಕೇಂದ್ರ ಸರ್ಕಾರದ ನೆರವಿನಿಂದ 1969–70ರಲ್ಲಿ ಕನ್ನಡ ಅಧ್ಯಯನ ವಿಭಾಗವನ್ನು ಆರಂಭಿಸಿ, ಕನ್ನಡದಲ್ಲಿ ಕೃಷಿ ಹಾಗೂ ಸಂಬಂಧಿತ ಕ್ಷೇತ್ರಗಳ ಸಾಹಿತ್ಯವನ್ನು ಪ್ರಕಟಿಸುವ ಕಾರ್ಯದಲ್ಲಿ ನಿರತವಾಗಿದೆ.

ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ವಿಭಾಗವು 1964ರ ಸಂಸತ್ತಿನ ತೀರ್ಮಾನದಂತೆ ಭಾರತೀಯ ಪ್ರಾದೇಶಿಕ ಭಾಷೆಗಳು ಶಿಕ್ಷಣದ ಮಾಧ್ಯಮವಾಗಬೇಕೆಂಬ ಹಿನ್ನೆಲೆಯಲ್ಲಿ, ಕೃಷಿ ಶಿಕ್ಷಣದಲ್ಲಿ ಕನ್ನಡವನ್ನು ಜಾರಿಗೆ ತರುವ ಪ್ರಯತ್ನದ ಪ್ರಥಮ ಹೆಜ್ಜೆಯಾಗಿ, ಕೃಷಿ ವಿಜ್ಞಾನಕ್ಕೆ ಸಂಬಂಧಿಸಿದ ವಿವಿಧ ವಿಷಯಗಳಿಗೆ ಸಂಬಂಧಿಸಿದ ಕನ್ನಡ ಪಠ್ಯಪುಸ್ತಕಗಳ ಪ್ರಕಟಣಾ ಕಾರ್ಯವನ್ನು ಕೈಗೊಂಡಿತು. ಅದರೊಂದಿಗೆ ಹಲವು ಕೃಷಿ ವಿಜ್ಞಾನ ಕ್ಷೇತ್ರಕ್ಕೆ ಸಂಬಂಧಿಸಿದ ಆಕರ ಗ್ರಂಥಗಳನ್ನು ಮತ್ತು ಪಾರಿಭಾಷಿಕ ಕೋಶಗಳನ್ನು ರಚಿಸಿ ಕನ್ನಡದಲ್ಲಿ ಕೃಷಿಸಾಹಿತ್ಯ ರಚನೆಗಾಗಿ ಕನ್ನಡ ಭಾಷೆಯನ್ನು ಸಜ್ಜುಗೊಳಿಸಿದ ಕೀರ್ತಿಹೊಂದಿದೆ. ಕೃಷಿ ಸಾಹಿತ್ಯ ಮತ್ತು ಕೋಶಗಳಿಂದ ಕನ್ನಡ ಭಾಷೆಯನ್ನು ಹಾಗೂ ಸಾಹಿತ್ಯವನ್ನು ಆ ನೆಲೆಯಲ್ಲಿ ಶ್ರೀಮಂತಗೊಳಿಸುತ್ತದೆ. ಕನ್ನಡ ಅಧ್ಯಯನ ವಿಭಾಗದಿಂದ ವಿದ್ಯಾರ್ಥಿಗಳಿಗೆ, ರೈತರಿಗೆ, ಬೋಧಕರಿಗೆ, ಸಂಶೋಧಕರಿಗೆ, ವಿಸ್ತರಣಾ ಕಾರ್ಯಕರ್ತರಿಗೆ ಹಾಗೂ ಆಸಕ್ತರಿಗೂ ಸಹ ಉಪಯುಕ್ತವಾಗುವಂತಹ ಹಲವಾರು ಕೃತಿಗಳು ಪ್ರಕಟವಾಗಿವೆ.

ಇದುವರೆಗೆ ಕೃಷಿ ವಿಜ್ಞಾನದ ವಿವಿಧ ವಿಷಯಗಳಾದ ವ್ಯವಸಾಯ, ಪಶುಸಂಗೋಪನೆ, ತೋಟಗಾರಿಕೆ, ಗೃಹವಿಜ್ಞಾನ, ಅರಣ್ಯ, ರೇಷ್ಮೆ ಕೃಷಿ, ಜೇನುಸಾಕಣೆ, ಹೈನುವಿಜ್ಞಾನ, ಕೃಷಿ ಇಂಜಿನಿಯರಿಂಗ್ ಹಾಗೂ ಮೂಲ ವಿಜ್ಞಾನ ವಿಷಯಗಳಲ್ಲಿ ಮುನ್ನೂರಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಲಾಗಿದ್ದು, ಇವು ಆಯಾ ವಿಷಯಗಳಲ್ಲಿ ಪಠ್ಯ ಪೂರಕ

ವಿಶಿಷ್ಟ ಜ್ಞಾನವನ್ನು ರೈತರು ತಮ್ಮ ಜಮೀನುಗಳಲ್ಲಿ ಅಳವಡಿಸಿಕೊಳ್ಳಲು ಮಾಹಿತಿ ಸಂವಹನ ವ್ಯವಸ್ಥೆ ಅಭಿವೃದ್ಧಿಪಡಿಸಲಾಯಿತು. ಕೃಷಿಯತ್ತ ಜನರನ್ನು ಸೆಳೆಯುವ ಸಲುವಾಗಿ ಪ್ರಗತಿಶೀಲ ಕೃಷಿ ಪದ್ಧತಿ, ಧಾನ್ಯ ಸಂರಕ್ಷಣಾ ವಿಧಾನ, ತೋಟಗಾರಿಕೆ ಮುಂತಾದ ವಿಷಯಗಳನ್ನು ರೈತರಿಗೆ ಪುಸ್ತಕ ರೂಪದಲ್ಲಿ ತಲುಪಿಸುವ ಅಗತ್ಯತೆಯನ್ನು ಮನಗಾಣಲಾಯಿತು. ಇದಕ್ಕೆ ಪೂರಕವಾಗಿ ವೈಜ್ಞಾನಿಕ ಪಠ್ಯಪುಸ್ತಕ ಹಾಗೂ ಕಿರುಪುಸ್ತಕಗಳನ್ನು ಸರಳ, ಸುಂದರ, ವಿಚಾರಪೂರ್ಣ ಶೈಲಿಯಲ್ಲಿ ರೈತರಿಗೆ ಒದಗಿಸಿಕೊಡುವ ವಿಶಿಷ್ಟ ಕಾರ್ಯವನ್ನು ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ವಿಭಾಗವು ಕೈಗೊಳ್ಳುತ್ತಿರುವುದು ಶ್ಲಾಘನೀಯ ವಿಚಾರವಾಗಿದೆ.

ರಾಜ್ಯ ಸರ್ಕಾರದ ಅನುದಾನದಲ್ಲಿ ಈ ಕಾರ್ಯವನ್ನು ಮುಂದುವರಿಸಿರುವ ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ವಿಭಾಗವು ಕೃಷಿ ಸಂಶೋಧನಾ ಗ್ರಂಥ ಪ್ರಕಟಣೆ ಹಾಗೂ ಇನ್ನಿತರ ಭಾಷಾಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಂಡಿರುವುದು ಸಂದರ್ಭೋಚಿತವಾಗಿದೆ. ಈ ಮಹತ್ಕಾರ್ಯದಲ್ಲಿ ವಿಶ್ವವಿದ್ಯಾನಿಲಯ ಯಶಸ್ವಿಯಾಗಲಿದೆ ಎಂಬುದು ನಮ್ಮೆಲ್ಲರ ಆಶಯ. ಈ ಕಾಯಕದಲ್ಲಿ ತೊಡಗಿಸಿಕೊಂಡಿರುವ ಸಂಪಾದಕರನ್ನು, ಸಂಪಾದಕ ಸಮಿತಿಯನ್ನು ಮತ್ತು ಕುಲಪತಿ ಡಾ. ಡಿ.ಪಿ. ಕುಮಾರ್ ಅವರನ್ನೂ, ಕುಲಸಚಿವ ಡಾ. ಎಂ.ಬಿ. ರಾಜೇಗೌಡ ಅವರನ್ನೂ ನಾನು ಕರ್ನಾಟಕ ಸರ್ಕಾರದ ಪರವಾಗಿ ಅಭಿನಂದಿಸುತ್ತೇನೆ.

(ಡಾ॥ ಕೆ.ಎ. ದಯಾನಂದ)

# ಸಂಪಾದಕರ ಮಾತು

ಸಸ್ಯಗಳನ್ನು ಗುರುತಿಸಲು ಅವುಗಳ ವೈಜ್ಞಾನಿಕ ಮತ್ತು ಕುಟುಂಬಗಳ ಹೆಸರು ಅವಶ್ಯಕ. ಒಂದು ಸಸ್ಯಕ್ಕೆ ಒಂದೇ ಭಾಷೆಯಲ್ಲಿ ಹಲವಾರು ಹೆಸರುಗಳಿರುತ್ತವೆ. ಕನ್ನಡದಲ್ಲಿಯೂ ಇದಕ್ಕೆ ಅಪವಾದವಿಲ್ಲ. ಯಾವುದೇ ಸಸ್ಯದ ಸರಿಯಾದ ಹೆಸರು ತಿಳಿಯದೆ ಗೊಂದಲ ಉಂಟಾಗುತ್ತದೆ. ಸಸ್ಯವಿಜ್ಞಾನಿ, ಕೃಷಿ ವಿಜ್ಞಾನಿ, ಅದರಲ್ಲಿಯೂ ಬೇಸಾಯ, ತಳಿಅಭಿವೃದ್ಧಿ, ರೋಗನಿದಾನ ಕೀಟತಜ್ಞರುಗಳಿಗೆ ತಮ್ಮ ಸಂಶೋಧನಾ ಕಾರ್ಯಗಳನ್ನು ಪರಿಣಾಮಕಾರಿಯಾಗಿ ನಡೆಸಲು ಸಸ್ಯಗಳ ನಿರ್ದಿಷ್ಟವಾದ ಹೆಸರು ತಿಳಿದಿರುವುದು ಅತ್ಯಾವಶ್ಯಕ. ಹಾಗೆಯೇ ತೋಟಗಾರಿಕೆ ಹಾಗೂ ಅರಣ್ಯ ವಿಭಾಗಗಳ ಕೆಲಸಗಾರರಿಗೆ ಗಿಡ, ಮರ, ಕಂಟೆ, ಪೊದೆ, ಹುಲ್ಲು, ಬಳ್ಳಿಗಳ ಹೆಸರುಗಳು ಸರಿಯಾಗಿ ತಿಳಿದಿರುವುದು ಅವಶ್ಯಕ.

ಕರ್ನಾಟಕದಲ್ಲಿ ಕಂಡುಬರುವ ಸುಮಾರು ಎರಡುಸಾವಿರ ಸಸ್ಯಗಳ ಹೆಸರುಗಳನ್ನು ಈ ಗ್ರಂಥದಲ್ಲಿ ಸಂಗ್ರಹಿಸಲಾಗಿದೆ. ಮೊದಲನೆಯ ಭಾಗದಲ್ಲಿ ಸಸ್ಯಗಳ ವೈಜ್ಞಾನಿಕ ಹೆಸರುಗಳನ್ನು ಅಕಾರಾದಿಯಲ್ಲಿ ಜೋಡಿಸಿ, ಜೊತೆಗೆ ಕುಟುಂಬ, ಇಂಗ್ಲಿಷ್ ಹಾಗೂ ಕನ್ನಡ ಸಾಮಾನ್ಯ ಹೆಸರುಗಳನ್ನೂ ಸಹ ಕೊಡಲಾಗಿದೆ. ಎರಡನೆಯ ಭಾಗದಲ್ಲಿ ಕನ್ನಡ ಹೆಸರುಗಳನ್ನು ಅಕಾರಾದಿಯಲ್ಲಿ ಜೋಡಿಸಿ ಜೊತೆಗೆ ಮೊದಲನೆಯ ಭಾಗದಲ್ಲಿನ ಸಂಬಂಧಪಟ್ಟ ಸಂಖ್ಯೆಗಳನ್ನು ಕೊಡಲಾಗಿದೆ.

ಈ ಪುಸ್ತಕವನ್ನು ಶ್ರೀ ಎಸ್. ಜಿ. ನರಸಿಂಹಾಚಾರ್ ರವರು ರಚಿಸಿದ್ದು, ಇದರ ತಾಂತ್ರಿಕ ಪರಿಶೀಲನೆ ಕಾರ್ಯವನ್ನು ಡಾ. ಕೆ. ಸುಬ್ರಮಣ್ಯಂ, ನಿವೃತ್ತ ನಿರ್ದೇಶಕರು, ಬಟಾನಿಕಲ್ ಸರ್ವೆ ಆಫ್ ಇಂಡಿಯಾ ಇವರು ನಿರ್ವಹಿಸಿರುತ್ತಾರೆ. ಈ ಸಂಕಲನವನ್ನು ಸಂಪೂರ್ಣವಾಗಿ ಡಾ.ಎ.ಎನ್.ಶೃಂಗೇಶ್ವರ, ಸಂಶೋಧನಾ ಸಹಾಯಕರು, ಸಸ್ಯೋದ್ಯಾನ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಇವರು ಪರಿಷ್ಕರಿಸಿದ್ದಾರೆ.

**ಕೆಲವು ಸಸ್ಯಗಳ ವೈಜ್ಞಾನಿಕ, ಕುಟುಂಬ, ಇಂಗ್ಲಿಷ್ ಹಾಗೂ ಕನ್ನಡ ಹೆಸರುಗಳು** ಪುಸ್ತಕವು ಕೃಷಿ ವಿಜ್ಞಾನಿಗಳು, ವಿದ್ಯಾರ್ಥಿಗಳು, ಬೋಧಕರು, ಸಂಶೋಧಕರು, ಲೇಖಕರು ಮತ್ತು ಅನುವಾದಕರು ಹಾಗೂ ಇತರ ಎಲ್ಲಾ ಆಸಕ್ತರಿಗೂ ಉಪಯುಕ್ತವಾಗುವುದೆಂದು ಆಶಿಸಲಾಗಿದೆ.

**ಡಾ. ಜೆ. ಬಾಲಕೃಷ್ಣ**
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಹಾಗೂ
ಕನ್ನಡ ಅಭಿವೃದ್ಧಿ ಸಮಿತಿ ಕಾರ್ಯದರ್ಶಿ

ಕನ್ನಡ ಅಧ್ಯಯನ ವಿಭಾಗ
ಕೃಷಿ ವಿಶ್ವವಿದ್ಯಾನಿಲಯ
ಬೆಂಗಳೂರು–560 065

# ಪರಿವಿಡಿ

## ಭಾಗ – 1

# ಕೆಲವು ಸಸ್ಯಗಳ ವೈಜ್ಞಾನಿಕ, ಕುಟುಂಬ, ಇಂಗ್ಲಿಷ್ ಹಾಗೂ ಕನ್ನಡ ಹೆಸರುಗಳು

# ಕೆಲವು ಸಸ್ಯಗಳ ವೈಜ್ಞಾನಿಕ ಕುಟುಂಬ, ಇಂಗ್ಲಿಷ್ ಹಾಗೂ ಕನ್ನಡ ಹೆಸರುಗಳು

## A

1 ***Abelmoschus esculentus*** (L.) Moench, Malvaceae; ಬೆಂಡೆಕಾಯಿಗಿಡ, ಬೆಂಡೆನಾರು.

2 ***A. ficulneus*** (L.) Wight & Arn., Malvaceae; ಸಣ್ಣಬೆಂಡೆ.

3 ***A. moschatus*** Medik., Malvaceae; Musk mallow; ಕಸ್ತೂರಿಬೆಂಡೆ, ಕಾಡುಕಸ್ತೂರಿ, ಸಟಾಕಸ್ತೂರಿ.

4 ***Abies spectabilis*** (D.Don) Mirb., Pinaceae; ತಾಳೀಶಪತ್ರೆ.

5 ***Abroma augusta*** (L.) L.f., Malvaceae; Devil's cotton, Perennial hemp; ದೆವ್ವಹತ್ತಿ, ಭಂಗಿಮರ, ಮೇಲ್ಪುಂಡಿಗಿಡ.

6 ***Abrus precatorius*** L., Leguminosae; Crab's eye, Willid liquorice; ಗುಲಗಂಜಿ, ಗುಂಜಿ, ಗುಂಡುಮಣಿ, ಗುಂಜೀಬೀಜ, ಮಧುಕವಲ್ಲಿ, ಹಾಗ, ಹೌಡಿಗೆ.

7 ***Abutilon hirtum*** (Lam.) Sweet, Malvaceae; ತುತ್ತಿ.

8 ***A. indicum*** (L.) Sweet, Malvaceae; country mallow, Demon's comb; ಕಿಸಂಗಿ, ಗಿಡುತಿಂಗಿ, ತುರುಬೀ ಗಿಡ, ನೆಲದುರುವೆ, ಶ್ರೀಮುದ್ರೆಗಿಡ, ಹಾಗಡೆ, ಹೆತ್ತುಕಿಸು, ಹೆತ್ತುತ್ತಿ.

9 ***A. persicum*** (Burm.f.) Merr., Malvaceae; ಬೆಟ್ಟಬೆಂಡುಗಿಡ.

10 ***A. polyandrum*** (Roxb.) Wight & Arn. see ***Abutilon persicum*** (Burm.f.) Merr.

11 ***Acacia catechu*** (L.f.) Willd., Leguminosae; ಕಗ್ಗಲಿ, ಕಾಚು, ಕುಗ್ಲಿ, ಕಂಟಿ, ಕೆಂಪಖೈರಪಜಾಲಿ, ತಾರೆ, ತಾರೆಡು, ತೆರೆ, ಸೇರೆಡು.

12 ***A. chundra*** (Rottler) Willd., Leguminosae; ಕಗ್ಲಿ, ಕೆಂಪುಕಗ್ಲಿ, ಕೆಂಪುಜಾಲಿ, ತಾರೆದ.

13 ***A. dealbata*** Link, Leguminosae; ಸೀಮೆಸೀಗೆ.

14 ***A. decurrens*** Willd., Leguminosae; ತಂಬಟಿಜಾಲಿ, ಪೀಕಜಾಲಿ.

15 ***A. eburnea*** (L.f.) Willd., Leguminosae; ಸೀಮೆಜಾಲಿ.

16 ***A. farnesiana*** (L.) Willd., Leguminosae; Cassie flower, Scented babool; ಕರಿಕಸ್ತೂರಿ, ಕಿರಿಜಾಲಿ, ಕಸ್ತೂರಿ ಜಾಲಿ, ಕಿರಿಕಸ್ತೂರಿ, ಕಿರಿಜಾಲಿ, ಜಾಲಿ, ಬ್ಯಾದಳಗಿಡ, ಸಣ್ಣಜಾಲಿ.

17 ***A. ferruginea*** DC., Leguminosae; ಕಿರಿಬನ್ನಿ, ಬನ್ನಿ.

18 ***A. horrida*** (L.) Willd., Leguminosae; Buffalow thorn, catch; ಆನೆಗೊಬ್ಬಿ, ಒಟ್ಟೆಗೊಬ್ಬಿ, ಗಬ್ಬುಜಾಲಿ, ಗೊಬ್ಬಿ, ದೊಣ್ಣೆ ಮುಳ್ಳಿನಜಾಲಿ, ದೋಣಿಜಾಲಿ, ವೊಟ್ಟೆ ಗೊಬ್ಬಳಿ, ಹೊಟ್ಟೆಜಾಲಿ.

19 ***A. latronum*** (L.f.) Willd. see *Acacia horrida* (L.) Willd.

20 ***A. leucophloea*** (Roxb.) Willd., Leguminosae; White babool; ತುಂಬಿ, ತುಂಬೆಮರ, ತೊಪ್ಪಾಲೆ, ದಾರುಖಿಗಾರ್, ನಾಯಿಬೇಲ, ಬಿಳಿಜಾಲಿ, ಸಾರಾಯಿಬೇಲ.

21 ***A. melanoxylon*** R.Br., Leguminosae; ಸೀಮೆಗೊಬ್ಬಳಿ.

22 ***A. nilotica* subsp. *indica*** (Benth.) Brenan, Leguminosae; Babool tree, Gum arabic, Indian acacia; ಕರಿಗಿ, ಕರಿಬೇಲ, ಕರಿಗೊಬ್ಬಳಿ, ಕರಿಜಾಲಿ, ಗೊಬ್ಬಳಿ, ಬರ್ಬರ, ಬೊಚ್ಚುಲಿ, ಬೊಬ್ಬಿ, ರಾಮಕಂಟಿ, ಶಮೀ.

23 ***A. pennata*** (L.) Willd., Leguminosae; ಕಾಡುಸೀಗೆ, ಮುಳ್ಳುಸೀಗೆ, ಸೀಗುರಿ.

24 ***A. planifrons*** Wight & Arn., Leguminosae; Umbrella thorn; ಒಡೆವರ, ಕೊಡೆಮುಳ್ಳುಜಾಲಿ, ಬುಡ್ಡೆಜಾಲಿ, ಹೊಡೆಜಾಲಿ.

25 ***A. polyacantha*** Willd., Leguminosae; ಚೆಲಾರ್‌ಗುಡಿ, ಬುಗುಳಿ, ಮುಕ್ಕಿಲಿ, ಮುಗಳಿಸೊಪ್ಪು, ಮುಗುಲಿ, ಮುಗ್ಲಿ.

26 ***A. pycnantha*** Benth., Leguminosae; Golden wattle; ಸ್ವರ್ಣಜಾಲಿ, ಹಳದಿಜಾಲಿ.

27 ***A. senegal*** (L.) Willd., Leguminosae; ಹಿರೀಜಾಲಿ.

28 A. sinuata (Lour.) Merr., Leguminosae; soapnut powder; ಒಳ್ಳೆಸೀಗೆ, ಮಂದಸೀಗೆ, ಸೀಗೆಕಾಯಿ.

29 ***A. sundra*** (Roxb.) DC. see *Acacia chundra* (Rottler) Willd.

30 ***A. tomentosa*** Willd., Leguminosae; ಆನೆಮುಳ್ಳು.

31 ***A. torta*** (Roxb.) Craib, Leguminosae; ಅಂತಿರಿಕೆ, ಕೆಂಪು ಸೀಗೆ, ಚಂಡೇಮುಳ್ಳು.

32 ***Acalypha fruticosa*** Forssk., Euphorbiaceae; ಚಿನ್ನಿಮರ.

33 ***A. indica*** L., Euphorbiaceae; Indian acalypha; ಕುಪ್ಪಿಗಿಡ, ಕುಪ್ಪುಂಟೆಸೊಪ್ಪು, ಚಲ್ಮಾರಿ, ಜಲಮಲಿ, ತುಪ್ಪಕೀರೆ.

34 ***Acampe praemorsa*** (Roxb.) Blatt. & McCann, Orchidaceae; ಗಂಧನಕುಲಿ, ಸೀತೆದಂಡೆ.

35 ***Acanthospermum hispidum*** DC., Compositae; ಕಡ್ಲೆಮುಳ್ಳು.

36 ***Acanthus ilicifolius*** L., Acanthaceae; ತುಡೆಚುಳ್ಳಿ, ಮುಳ್ಳಿ, ಚುಳ್ಳಿ, ಹರಿಕುಶ, ಹೊಳೆಚುಳ್ಳಿ.

37 ***Achillea millefolium*** L., Compositae; Milfoil, Yarrow; ರೋಜಮಾರಿ.

38 ***Achras zapota*** L. see ***Manilkara zapota*** (L.) P.Royen

39 ***Achyranthes aspera* var. *porphyristachya*** (Wall. ex Moq.) Hook.f., Amaranthaceae; Chaff flower; ಉತ್ತರಾಣಿ, ಉತ್ತರೇನಿ, ಕೆಂಪುಉತ್ರಾಣಿ, ಮಯೂರಕ, ಶೈಖರಿಕ.

40 ***Acilepis dendigulensis*** (DC.) H.Rob., Compositae; ಅರಮುಕನ್ನೆ.

41 ***Acmella paniculata*** (Wall. ex DC.) R.K. Jansen, Compositae; ಅಚಾರ ಜೊಂಡಿ, ಸಣ್ಣವನ ಮುಗುಳಿ.

42 ***Aconitum chasmanthum*** Stapf ex Holmes, Ranunculaceae; ವತ್ಸನಾಭಿ, ವಸನಾಭಿ, "ಷನಾಗ, "ಷನಾಭಿ.

43 ***A. heterophyllum*** Wall. ex Royle, Ranunculaceae; ಅತಿವಿಷ, ಉಪವಿಷಾನಕ, ಭಂಗುರ, ಸೀತಾಶ್ರಿಂಗಿ.

44 ***A. luridum*** Hook.f. & Thomson see ***Aconitum novoluridum*** Munz

45 ***A. napellus*** L., Ranunculaceae; ಕಟುವಿಷ, ಸೀಮೆನಾಭಿ.

46 ***A. novoluridum*** Munz, Ranunculaceae; ಅತಿವಸ.

47 Acorus calamus L., Acoraceae; Sweet flag; ಅತಿಬಜೆ, ಕವಣ, ದಗಡೆ, ನಾರುಬೇರು, ಬಜೆ, ಬಾಜೆಗಿಡ.

48 ***Acrocarpus fraxinifolius*** Arn., Leguminosae; ಕಲ್ಕಳಿಂಗಿ, ಕಳಿಂಗಿ, ಕಿಳಿಂಗಿ, ಬೆಳಂಗಿ, ಹಾವುಲಿ, ಹೌಲಿಗೆ, ಹಂಟಿಗೆ, ಹುಡಿಗೆ.

49 ***Acronychia pedunculata*** (L.) Miq., Rutaceae; ಭೂತಾಳಿ, ಸೊನೆಮಾವು.

50 ***Actaea spicata*** L., Ranunculaceae; ವಿಷಫಲ.

51 ***Actiniopteris dichotoma*** Mett., Pteridaceae; ಮಯೂರಶಿಖಿ.

52 ***Actinodaphne angustifolia*** Nees see ***Actinodaphne gullavara*** (Buch.-Ham. ex Nees) M.R.Almeida

53 ***A. gullavara*** (Buch.-Ham. ex Nees) M.R.Almeida, Lauraceae; ಕಗ್ಗೊಡಗಿನ ಮರ, ಗಲವಾರ, ತುಡಗೆಣಸು, ತೂನಗೆಣಸು, ಹೆಗ್ಗೊಡ್ಡಿಮರ.

54 ***Actinoscirpus grossus*** (L.f.) Goetgh. & D.A.Simpson, Cyperaceae; ಕಸೇರು, ಗುಂಡುಕಾಂಡ, ಸಣ್ಣ ಗುಂಡು ಹುಲ್ಲು.

55 ***Adansonia digitata*** L., Malvaceae; African calabash tree, Baobab; ಆನೆಹುಣಿಸೆ, ಬ್ರಹ್ಮಾಮ್ಲಿಕ, ಬೇಯೋಬಾಬ್, ಮಗಿಮಾವು.

56 ***Adenanthera pavonina*** L., Leguminosae; coral wood, Red wood tree; ಆನೆಗುಲಗಂಜಿ, ದೊಡ್ಡಗುಲಗಂಜಿ, ಮಂಚಟಗ, ಮಂಜಡಿ, ಮಂಜತಿ, ಮಂಜಿಟ್ಟೆ, ಮಂಡತೀಯ.

57 ***Adenia hondala*** (Gaertn.) W.J.de Wilde, Passifloraceae; ಉಂಡಿಲ್, ಉಂಡಾಲ.

58 ***A. palmata*** Engl. see ***Adenia hondala*** (Gaertn.) W.J.de Wilde

59 ***Adhatoda vasica*** Nees see Justicia adhatoda L.

60 ***Adiantum aethiopicum*** L. see ***Adiantum chilense*** var. sulphureum (Kaulf.) Kuntze ex Hicken

61 ***A. capillus-junonis*** Rupr., Pteridaceae; Maiden hair fern; ಹಂಸರಾಜ.

62 ***A. caudatum*** L., Pteridaceae; ಆನೆಕಿವಿ, ಗಜಕರಣ, ಚೇಳುಕೊಂಡಿ ಗಿಡ.

63 ***A. chilense*** var. ***sulphureum*** (Kaulf.) Kuntze ex Hicken, Pteridaceae; ತಾಮ್ರಶಿಖಿ.

64 ***A. lunulatum*** Burm. f., Pteridaceae; ಹಂಸಪಾದಿ.

65 ***A. venustum*** D. Don, Pteridaceae; ದೊಡ್ಡ ನವಿಲು ಬಾಲ ಫೆರ್ನ್.

66 ***Adina cordifolia*** (Roxb.) Hook. f. see ***Haldina cordifolia*** (Roxb.) Ridsdale

67 ***Aegiceras corniculatum*** (L.) Blanco, Primulaceae; ಕಂಜಲಾ, ಸೂಲಿ, ಸೊಳೆ.

68 ***Aegle marmelos*** (L.) Correa, Rutaceae; ಕುಂಬಳ, ಬಿಲ್ಲಡು, ಬಿಲ್ವಪತ್ರೆ, ಬೆಲ್ಲಪತ್ರೆ, ಬೆಳ"ನಮರ, ಬೇಲಪತ್ರೆ, ಮಲೂರ.

69 ***Aerva lanata*** (L.) Juss., Amaranthaceae; ಬಿಳಿಸೂಲಿ, ಬಿಳಿಹಿಂಡಿಗಿಡ, ಬಿಳಿಹೂಲಿ.

70 ***A. monsoniae*** (L. f.) Mart. see ***Trichuriella monsoniae*** (L. f.) Bennet

71 ***A. sanguinolenta*** (L.) Blume, Amaranthaceae; ದೊಡ್ಡ ಹಿಂಡಿಗಿಡ.

72 ***Aeschynomene aspera*** L., Leguminosae; ಅಲಗಿನಗಿಡ, ತನಕಲಿ, ಬೆಂಡು, ಸೋಲಬೆಂಡುಮರ.

73 ***A. indica*** L., Leguminosae; ಬೆಂಡುಕಸ.

74 ***Aganosma caryophyllata*** G.Don, Apocynaceae; ಚಿತ್ರಲೀನಬಳ್ಳಿ.

75 ***A. dichotoma K.Schum,*** Apocynaceae; ಕೆಮ್ಮಟ್ಟಿಬಳ್ಳಿ, ಮಾಲತಿಲತ, ಸುಮನಾ.

76 ***Agaricus campestris*** L., Agáricaceae; Mushroom; ಅಣಬೆ, ಛತ್ರಿ, ನಾಯಿಕೊಡೆ.

77 ***Agasthiyamalaia pauciflora*** (Bedd.) S.Rajkumar & Janarth., Clusiaceae; ಬಲ್ಲಂಗಿ.

78 ***Agave americana*** L., Asparagaceae; American aloe, century plant, Railway aloe; ಆನೆಕತ್ತಾಳೆ, ಆನೆಮುಂಡಿ, ಕತ್ತಾಳೆ, ಕಲ್ನಾರು, ದೆವ್ವಬಾಳೆ, ಭೂತಾಳೆ, ರಾಕ್ಷಸಬಾಳೆ.

79 ***A. angustifolia*** Haw. see ***Agave vivipara*** L.

80 ***A. vivipara*** L., Asparagaceae; ದೊಡ ್ಡಕತ್ತಾಳೆ.

81 ***Ageratum conyzoides*** (L.) L., Compositae; ಊರಾಳಗಿಡ, ಮೂಗುತಿಗಿಡ, ಶ್ವೇತಸಹದೇವಿ.

82 ***Aglaia elaeagnoidea*** (A.Juss.) Benth., Meliaceae; ಎವಾಡು, ಕಲ್ಲಬೆಂಡಕ, ಕೆಂಪುನೊಳ, ತೊಟ್ಟಿಲಕಾಯಿ, ತೊಟ್ಟಿಲುಗಿಡ.

83 ***A. lawii*** (Wight) C.J.Saldanha, Meliaceae; ಕಾರಗಿಲ್, ಬಿರುಂಬಿ, ಮದ್ರಸದ.

84 ***A. roxburghiana*** (Wight & Arn.) Miq. see ***Aglaia elaeagnoidea*** (A.Juss.) Benth.

85 ***Ailanthus excelsa*** Roxb., Simaroubaceae; ದೊಡ್ಡಬೇರು, ದೊಡ್ಡಮರ, ಮಹಾನಿಂಬೆ, ಹಿರೇಮರ, ಹೆಬ್ಬೇವು.

86 ***A. malabarica*** DC. see ***Ailanthus triphysa*** (Dennst.) Alston

87 ***A. triphysa*** (Dennst.) Alston, Simaroubaceae; ಉಗುಳುಧೂಪ, ಗುಗ್ಗುಳಧೂಪ, ದೇವಧೂಪ, ಬಗ್ಗಡ ಧೂಪ, ಬಾಗಧೂಪ, ಮಡ್ಡಿಧೂಪ, ಮಂಡಧೂಪ, ಹಾಲ್ಮಡ್ಡಿ, ಹೆಮ್ಮರ.

88 ***Alangium lamarckii*** Thwaites see ***Alangium salviifolium*** (L.f.) Wangerin

89 ***A. salviifolium*** (L.f.) Wangerin, Cornaceae; ಅನ್ರ್ರೋಲಿ, ಅಂಕೋಥ, ಅಂಕೋಲೆ, ಕಲ್ಲುಮಾವು, ಗುಡ್ಡದ ಗೋಣಿ, ಸೆಮ್.

90 ***Albizia amara*** (Roxb.) B.Boivin, Leguminosae; ಚಿಗರಿ, ಚಿಗುರು, ಚುಜ್ಜಲು, ತುಗ್ಲಿಗಿಡ, ತುಗ್ಗಲಿ, ತುಗಿ, ಬೀಳ್ಕಂಬಿ, ಬೆಲತ್ತಿ, ಸಿಗಿರಿಯ, ಸುಜ್ಜಲು.

91 ***A. chinensis*** (Osbeck) Merr., Leguminosae; ಕಲ್ಬಾಗೆ, ಕೊಟ್ಟೆಪಾಲೆ, ಕೊಟ್ಟೆಬಾಗೆ, ಬಗನ, ಬಾಗೆ, ಬಾಗೆಸುಜ್ಜಲು, ಬೆಟ್ಟಬಾಗೆ, ಹೊಟ್ಟೆಬಾಗೆ.

92 ***A. julibrissin*** Durazz., Leguminosae; ಎಲೆಸುಜ್ಜಲು ಬಾಗೆ, ಚೆಲ, ಚೆಲಬಾಗೆ, ಸೆಲ, ಸಲಿವ.

93 ***A. lebbeck*** (L.) Benth., Leguminosae; Siris tree; ಗುಲ್ಮೋರ, ಗೊಡ್ಡು, ಹುಣಿಸೆ, ತ್ರಿಚೂಲ್, ದೊಡ್ಡಬಾಗೆ, ದೊಡ್ಡಬಾಗೆ, ದೊಡ್ಡ ಶಿರೀಷ, ಬಿಗಡ, ಶಿರೀಷ, ಸಿರ್ಸುಲ್.

94 ***A. odoratissima*** (L.f.) Benth., Leguminosae; ಏನುಬಾಗೆ, ಕಡಚೆ, ಕಲ್‌ಸಿರೀಷ, ಕಲಿಂಗಿ, ಕಾಡುಬಾಗೆ, ಗೋಲಂಚಿ, ಪುಳಿಬಾಗೆ, ಬಚಾರಿ, ಬಿಳಿಕಂಬಿ, ಬಿಳಿವಾರ, ಬೆಟ್ಟಸುಜ್ಜಲು.

95 ***A. procera*** (Roxb.) Benth., Leguminosae; ಅಥಂಜಿ, ಚಾಲಿಯ, ಚಿಕುಲ್, ಬಾಗಿ, ಬಿಕುಲ್, ಬಿಳಿಬಾಗೆ, ಬೆಲ್ಲಟ್ಟೆ, ಸಾಲಯುದಿ, ಸೆಲಿಂದಿ, ಸೆಲ, ಸೆಲೆಯಾಡ.

96 ***A. saman*** (Jacq.) Merr., Leguminosae; ಮಳೆಮರ.

97 ***A. stipulata*** B.Boivin see ***Albizia chinensis*** (Osbeck) Merr.

98 ***Alcea rosea*** L., Malvaceae; ಕೆಂಪು ಸೀಮೆತುತ್ತಿ.

99 ***Aleurites fordii*** Hemsl. see ***Vernicia fordii*** (Hemsl.) Airy Shaw

100 ***A. moluccanus*** (L.) Willd., Euphorbiaceae; Belgaum Walnut, Candlenut; ಅಲ್ಯೂರೈಟಸ್‌ಗಿಡ, ನಾಟಕ್ರೋಟು, ನಾಡುಅಕ್ರೋಟು.

101 ***Alhagi pseudalhagi*** (M. Bieb.) Desv. ex B. Keller & Shap., Leguminosae; ಜಯಸಿ, ತೊರೆಇಂಗಳ, ಧುರ್ಲವ, ಬಳ್ಳಿತುರಚಿ, ಬಳ್ಳಿದುರಬ.

102 ***Allamanda cathartica*** L., Apocynaceae; Dogbane; ಅರಿಸಿನ ಹೂ, ಅಲ್ಲಮಂದಗಿಡ, ಹಳದಿಹೂ.

103 ***Allium cepa*** L., Amaryllidaceae; Onion; ಈರುಳ್ಳಿ, ಉಳ್ಳಗಡ್ಡಿ, ಉಳ್ಳಿಗಡ್ಡಿ, ನೀರುಳ್ಳಿ, ಉಳ್ಳೀಗಡ್ಡಿ.

104 ***A. sativum*** L., Amaryllidaceae; Garlic; ಬಳ್ಳೊಳ್ಳಿ, ಬೆಳ್ಳುಳ್ಳಿ.

105 ***Allmania nodiflora*** (L.) R.Br. ex Wight, Amaranthaceae; ಬುಡ್ಡೆಸೊಪ್ಪು.

106 ***Allophylus distachys*** (DC.) Radlk. see ***Allophylus subfalcatus*** var. ***distachyus*** (DC.) S.Mukh.

107 ***A. serratus*** (Hiern) Kurz, Sapindaceae; ಎರ್ರಾಲ, ಸಿರುಸಾಲೆ, ಸಿಸಿದಾಳೆ.

108 ***A. subfalcatus*** var. ***distachyus*** (DC.) S.Mukh., Sapindaceae; ತೊಗರತ್ತಿ, ಸಿಡಿಸಾಲೆ.

109 ***Alloteropsis cimicina*** (L.) Stapf, Poaceae; ನೀರುಸಜ್ಜೆ ಹುಲ್ಲು.

110 ***Alocasia indica*** (Lour.) Spach see ***Alocasia macrorrhizos*** (L.) G.Don

111 ***A. macrorrhizos*** (L.) G.Don, Araceae; ಮರಸಕಾಗೆ, ಮರಸಣಿ, ಮುಂಡಿಗಿಡ, ಕರೆಮೆಣಸಂಗಿ, ನೀರುಗೆಣಸು, ಬಾಳರಾಕ್ಷ, ಮಾನಕ.

112 ***Aloe vera*** (L.) Burm.f., Xanthorrhoeaceae; Barbados aloe; ಕತ್ತಿಗಿಡ, ಕುಮರಿ, ಗೋಲಿಸರ, ತಾರಣ, ಮುಸಾಂಬ್ರ, ರಕ್ತಪವಳ, ರಕ್ತಬಲ, ಲೋಳಿಸರ, ಸೀಮೆಕತ್ತಾಳಿ.

113 ***Alpinia allughas*** (Retz.) Roscoe see ***Alpinia nigra*** (Gaertn.) Burtt

114 ***A. galanga*** (L.) Willd., Zingiberaceae; ಕುಲಿಂಜನ, ಗಂಧಮೂಲ.

115 ***A. nigra*** (Gaertn.) Burtt, Zingiberaceae; ಬೆಟ್ಟಶುಂಠಿ.

116 ***A. speciosa*** (J.C.Wendl.) K.Schum. see ***Alpinia zerumbet*** (Pers.) B.L.Burtt & R.M.Sm.

117 ***A. zerumbet*** (Pers.) B.L.Burtt & R.M.Sm., Zingiberaceae; ದುಂಪರಾಸ್ಮೆ, ದುಂಬರಾಸ್ಮ.

118 ***Alseodaphne semecarpifolia*** Nees, Lauraceae; ಕರುವಾಡಿ, ನೆಲ್ಲಾರೆ, ನೆಲ್ಲೋರೆ, ನೇರುತಾಲೆ, ಮಶಾಯಿ.

119 ***Alstonia scholaris*** (L.) R. Br., Apocynaceae; Ditabark, Stainwood; ಎಲೆಬಾಳೆ, ಎಲೆಹಾಳೆ, ಏಳೆಲೆಬಾಳೆ, ಕಾಡುಸಾಲೆ, ಕಾಡುಹಾಲೆ, ಕೋಡಾಲೆ, ಜಂತಟ್ಟಿ, ಜಂತ್ರಹಾಲೆ, ಜಂತಾಲೆಮರ, ಪಲೇಜಂಬು, ಮದ್ದಾಲೆ, ಮಡಿಹಾಲೆ, ಸಪ್ತಪರ್ಣಿ, ಹಾಲೆಮರ.

120 ***A. venenata*** R.Br., Apocynaceae; ಅಡ್ಡಸರ್ಪ.

121 ***Alternanthera pungens*** Kunth, Amaranthaceae; ಮಿರ್ಜಾಮುಳ್ಳು, ಮುಳ್ಳುಹೊನಗೊನ್ನೆ.

122 ***A. sessilis*** (L.) R.Br. ex DC., Amaranthaceae; ಹೊನಗೊನ್ನೇಸೊಪ್ಪು.

123 ***Althaea coromandeliana*** Cav. see ***Alcea rosea*** L.

124 ***A. officinalis*** L., Malvaceae; Marsh mallow; ಸೀಮೆತುತ್ತಿ.

125 ***Altingia excelsa*** Noronha, Altingiaceae; ಶಿಲಾಜಿತ್.

126 ***Alysicarpus monilifer*** (L.) DC., Leguminosae; ಕಲ್ಲುನಾಮದ ಸೊಪ್ಪು.

127 ***A. vaginalis*** (L.) DC., Leguminosae; ನಾಮದಸೊಪ್ಪು.

128 ***Amaranthus blitum*** L., Amaranthaceae; ಕಿರಕಸಾಲೆ, ಕಿರಗಸಾಲೆ, ಗಿರಕಸಾಲೆ, ಚಿಲಕರಿವೆ, ಹಂದಿಕೀರೆ.

129 ***A. blitum*** subsp. ***oleraceus*** (L.) Costea, Amaranthaceae; ಕೆಂಪುದಂಟು ಸೊಪ್ಪು.

130 ***A. caudatus*** L., Amaranthaceae; Love-lies bleeding; ಕೀಳುಹರಿವೆ, ಚಿಲಿಕೆಸೊಪ್ಪು, ರಾಜಗೀರ್, ರಾಮದನ, ಸಿರುಕೀರೆ.

131 ***A. polygamus*** L., Amaranthaceae; Prince's feather; ಗೊರಜಿ, ಗೊರವಿಪಲ್ಯ, ಚಿಕ್ಕೀರೆಸೊಪ್ಪು.

132 ***A. spinosus*** L., Amaranthaceae; ಮುಳ್ಳುಕೀರೆಸೊಪ್ಪು, ಮುಳ್ಳುಗೊರಕೊಚ್ಚು, ಮುಳ್ಳುಹರಿವೆಸೊಪ್ಪು.

133 ***A. tricolor*** L., Amaranthaceae; ಕೀರೆಸೊಪ್ಪು, ದಂಟಿನಸೊಪ್ಪು, ಹರಿವೆಸೊಪ್ಪು, ಕುನಂಬು, ಚಿವಿಕೆಸೊಪ್ಪು, ದಂಟುಪಲ್ಯ, ಚಿಕ್ಕಹರಿವೆಸೊಪ್ಪು.

134 ***A. viridis*** L., Amaranthaceae; ಕೆರೆಸೊಪ್ಪು, ದಗ್ಗಿಸೊಪ್ಪು,

135 ***Amischophacelus axillaris*** (L.) R.S.Rao & Kammathy see Cyanotis axillaris (L.) D.Don ex Sweet

136 ***A. cucullata*** (Roth) R.S.Rao & Kammathy see ***Cyanotis cucullata*** (Roth) Kunth

137 ***Ammannia baccifera*** L., Lythraceae; Blistering ammonia; ಅಗ್ನಿವತಿ, ಅಗ್ನಿವಯ, ಅಗ್ನಿವೇಂದ್ರಪಾಕು, ಕಲ್ಲುರಿವೆ, ಕರಿಸನ್ನಿಗಿಡ.

138 ***Amomum aromaticum*** Roxb., Zingiberaceae; ಕಾಗೆ ಏಲಕ್ಕಿ.

139 ***A. subulatum*** Roxb., Zingiberaceae; Greater carda mom, Nepal cardamom; ದೊಡ್ಡ ಏಲಕ್ಕಿ, ನೇಪಾಳಿ ಏಲಕ್ಕಿ.

140 ***A. villosum*** var. ***xanthioides*** (Wall. ex Baker) T.L.Wu & S.J.Chen, Zingiberaceae; ಕಾಡು ಏಲಕ್ಕಿ.

141 ***A. xanthioides*** Wall. ex Baker see ***Amomum villosum*** var. ***xanthioides*** (Wall. ex Baker) T.L.Wu & S.J.Chen

142 ***Amoora canarana*** (Turcz.) Hiern see ***Aglaia lawii*** (Wight) C.J.Saldanha

143 ***A. lawii*** (Wight) Bedd. see ***Aglaia lawii*** (Wight) C.J.Saldanha

144 ***A. rohituka*** (Roxb.) Wight & Arn. see ***Aphanamixis polystachya*** (Wall.) R.Parker

145 ***Amorphophallus bulbifer*** (Roxb.) Blume, Araceae; ಕಾಡುಕಂದಗೆಡ್ಡೆ, ಕಾಡುಚೂರ್ಣಗೆಡ್ಡೆ, ಕಾಡುಸೂರಣಗೆಡ್ಡೆ.

146 ***A. campanulatus*** Decne. see ***Amorphophallus paeoniifolius*** (Dennst.) Nicolson

147 ***A. paeoniifolius*** (Dennst.) Nicolson, Araceae; Elephant yam; ಕಂದಗೆಡ್ಡೆ, ಗಂಡೀರ, ಚೂರ್ಣಗೆಡ್ಡೆ, ಸೂರಣಗೆಡ್ಡೆ, ಸುವರ್ಣಗಡ್ಡೆ.

148 ***Ampelocissus arnottiana*** Planch. see ***Ampelocissus indica*** (L.) Planch.

149 ***A. indica*** (L.) Planch., Vitaceae; ನರಂಡೆ, ಸಂಬಾರಗೆಡ್ಡೆ, ಸಾವಿರಸಂಬಾರ.

150 ***A. latifolia*** (Roxb.) Planch., Vitaceae; ಬಿಳಿಹಂಬು.

151 ***A. tomentosa*** (B.Heyne & Roth) Planch., Vitaceae; ಕಾಡುದ್ರಾಕ್ಷಿ.

152 ***Anacardium occidentale*** L., Anacardiaceae; Cashew nut; ಕೆಂಪುಗೇರು, ಗೇರುಪಪ್ಪು, ಗೇರ್ಲಿಕಾಯಿ, ಗೇರ್ಬೀಜ, ಗೋಡಂಬಿ, ಗೋರುಮಾವು, ಗೋವೆ, ಗೋಂಕುಡು, ಜಿಡಿವಾಟೆ, ತುರುಕಗೇರು.

153 ***Anagallis arvensis*** L., Primulaceae; Scarletrun ner; ಸೂರ್ಯಕಾಂತಿ ಸೊಪ್ಪು.

154 ***Anamirta cocculus*** (L.) Wight & Arn., Menispermaceae; Fish berry, Levant berries; ಕಾಕಮಾರಿ, ಕಾಕಿಸೊಪ್ಪು ಗೆಡ್ಡೆ, ಗರುಡಫ, ಚಿಮುಲಕೊಳ್ಳಿ, ಚಿಪ್ಲೊತ್ತಿ.

155 ***Ananas comosus*** (L.) Merr., Bromeliaceae; Ananas fruit; ಅನಾನಸು, ಅನಾಸು, ಪರಂಗಿತಲೆ, ಪರಂಗಿ ಹಲಸು, ಮುಳ್ಳುಹಲಸು.

156 ***Anaphalis neelgerryana*** (DC.) DC., Compositae; ಗಾಯದೊಪ್ಪಲು.

157 ***Andrographis echioides*** (L.) Nees, Acanthaceae; ಗೋಧಿಬರ್ಸಣ, ಪೀತುಂಬ.

158 ***A. paniculata*** (Burm.f.) Nees, Acanthaceae; Great; ಊರಕಿರಿಯಾತು, ಕಾಲಮೇಘ, ನೆಲಬೇವು.

159 ***A. serpyllifolia*** (Vahl) Wight, Acanthaceae; Karyat; ಕಾಸಿನಸರ, ಸರದಾಳಿಗೆಡ್ಡೆ.

160 ***Andropogon odoratus*** Dna.Lisboa see ***Bothriochloa bladhii*** (Retz.) S.T.Blake

161 ***A. pertusus*** (L.) Willd. see ***Bothriochloa pertusa*** (L.) A.Camus

162 ***A. pumilus*** Roxb., Poaceae; ಗೊಂಡವಾಲ, ಚಿಕ್ಕನುಗಹುಲ್ಲು, ಬೈರ್ಕಿ.

163 ***Anethum sowa*** Roxb. ex Fleming, Apiaceae; ಸದಕುಪ್ಪಿ, ಸಬ್ಬಕ್ಕಿ ಸೊಪ್ಪು.

164 ***Anisochilus carnosus*** (L.f.) Wall., Lamiaceae; ಕಪ್ಪರಳ್ಳಿ, ಕರವೇರು, ಕರ್ಪೂರದಗಿಡ, ಕುರವೇಲು, ದೊಡ್ಡಪತ್ರೆ, ಪತ್ರಿಗಿಡ.

165 ***Anisomeles indica*** (L.) Kuntze, Lamiaceae; ಮಂಗಮಾರಿ ಸೊಪ್ಪು, ಹುಚ್ಚುಮುಟ್ಟೆಗಿಡ, ಹೆಣ್ಣುಕರೀತುಂಬೆ.

166 ***A. malabarica*** (L.) R.Br. ex Sims, Lamiaceae; ಗಂಡುಕರೀತುಂಬೆ, ಗಂಡುಬೀರನ ಗಿಡ, ಮೊಗಬೀರಚೆಟ್ಟು.

167 ***Annona cherimola*** Mill., Annonaceae; ಚೆರಿಮೋಲಿಯ ಹಣ್ಣು, ಲಕ್ಷಣಫಲ, ಹನುಮಂತಫಲ.

168 ***A. muricata*** L., Annonaceae; Soursop; ಮುಳ್ಳುರಾಮಫಲ.

169 ***A. reticulata*** L., Annonaceae; ಮುಳ್ಳುಮುತ್ತಲ, ರಾಮಫಲ.

170 ***A. squamosa*** L., Annonaceae; Custard apple, Sweet sop; ಅಮೃತಫಲ, ಅಮುಚಿಕಾಯಿ, ದುರಂಜಿಹಣ್ಣು, ಸೀತಾಫಲ.

171 ***Anodendron paniculatum*** A.DC., Apocynaceae; ಮಣಿಬಳ್ಳಿ.

172 ***Anogeissus latifolia*** (Roxb. ex DC.) Wall. ex Guillem. & Perr., Combretaceae; Axlewood; ಡಿವಿಡಗು, ಡಿಂಡಾಲು, ದಿಂಡಲು, ದಿಂಡಿಗ, ಬೆಜ್ಜಲು, ಬೆಲ್ಲುಂಡ.

173 ***Anthocephalus cadamba*** (Roxb.) Miq. see ***Neolamarckia cadamba*** (Roxb.) Bosser

174 ***Antiaris toxicaria*** Lesch., Moraceae; Upas tree; ಅಜ್ಜನಪಟ್ಟೆ, ಅರಂಜಪಟ್ಟೆ, ಅರಂಜೆ, ಜಾಗುರಿ, ಬೈರಿ, ವಿಷವೃಕ್ಷ, ಸಗ್ಗುರಿ.

175 ***Antidesma acidum*** Retz., Phyllanthaceae; ಮುರ್ಗಿನಕೋಡೆ ಸೊಪ್ಪು, ಸಣ್ಣಗೂಗೆ.

176 ***A. bunius*** (L.) Spreng., Phyllanthaceae; ಕರೀ ಕೊಮ್ಮೆ, ನಾಯಿಕೂಟಿ.

177 ***A. diandrum*** (Roxb.) Spreng. see ***Antidesma acidum*** Retz.

178 ***A. ghaesembilla*** Gaertn., Phyllanthaceae; ಪುಳ್ಳಂಪುರಸಿ ಗಿಡ.

179 ***A. menasu*** (Tul.) Müll.Arg. see ***Antidesma montanum*** Blume

180 ***A. montanum Blume,*** Phyllanthaceae; ಕಡಿವಾಳಸೊಪ್ಪು.

181 ***Apama siliquosa*** Lam. see ***Thottea siliquosa*** (Lam.) Ding Hou

182 ***Aphanamixis polystachya*** (Wall.) R.Parker, Meliaceae; ಟಿಟ್ಟಿಲಿಕಾಯಿ, ತೊಟ್ಟೆಲೆ, ಮುಳ್ಳುಮುತ್ತುಗ, ಹೊಟ್ಟೆನೊಳ.

183 ***Aphananthe cuspidata*** (Blume) Planch., Cannabaceae; ಗಬ್ಬುಚಕ್ಕೆ, ನರಕ ಭೂತಾಳೆ.

184 ***Apium graveolens*** L., Apiaceae; Celery; ಗುಡ್ಡದ ಸೋಂಪು, ಪಚಡಿಸೊಪ್ಪು, ಸೆಲೆರಿನ.

185 ***Apluda mutica*** L., Poaceae; ಅಕ್ಕುಹುಲ್ಲು, ಕರೀಹಂಚೀ ಹುಲ್ಲು, ಕಾಡುಹಂಚೀಹುಲ್ಲು, ಕರೀಕಾಚಿಹುಲ್ಲು.

186 ***Apodytes beddomei*** Mast. see ***Apodytes dimidiata*** E.Mey. ex Arn.

187 ***A. benthamiana*** Wight see ***Apodytes dimidiata*** E.Mey. ex Arn.

188 ***A. dimidiata*** E.Mey. ex Arn., Icacinaceae; ಕಂಬ್ಳಿ., ಕೈಂಕ.

189 ***Aponogeton natans*** (L.) Engl. & K.Krause, Aponogetonaceae; ನೀರುಕಸ, ನೀರುಬಳ್ಳಿ.

190 ***Aporosa cardiosperma*** (Gaertn.) Merr., Phyllanthaceae; ಸರಳಿ, ಸಲ್ಲಿ, ಸಲ್ಲೆ, ಸುನೋಲೆ, ಸುಲ್ಲ.

191 ***A. lindleyana*** (Wight) Baill. see ***Aporosa cardiosperma*** (Gaertn.) Merr.

192 ***Aquilaria agallocha*** Roxb., Thymelaeaceae; Galambac, Eagle wood; ಅಗರು, ಅಗಿಲುಗಂಧ.

193 ***Arachis hypogaea*** L., Leguminosae; Groundnut, Monkeynut, Peanut; ಕಡಲೆಕಾಯಿ, ಕಳ್ಳೆಕಾಯಿ, ನೆಲಗಡಲೆಕಾಯಿ, ಬೇರುಕಡಲೆ, ಶೇಂಗಾ.

194 ***Archidendron bigeminum*** (L.) I.C.Nielsen, Leguminosae; ಕಕ್ಕೆ, ಕಡಕೊಂಬೆ, ಕಾನಕರಿಂಚಿ, ಕಾರ್, ಕೊಂಕರಿಂಗೆ,ಕೊರಚಟೆ, ನುಗ್ಗೆ.

195 ***Ardisia solanacea*** (Poir.) Roxb., Primulaceae; ಚಿಟ್ಲಿ, ಬೋದಿನ ಗಿಡ, ಬೋದೆ, ಮಿಟ್ಲಮನಿ.

196 ***Areca catechu*** L., Arecaceae; Arecanut, Betelnut; ಅಡಕಿ, ಅಡಕೆ, ಅಡಿಕಿ, ಕೌಂಗು, ಖಪೂರ, ಗೋಟಡಿಕೆ, ಚಿಕ್ಕೆ, ಚೌಟಕಿ, ತಂಬುಲ, ಪೂಗ, ಪೂಗಿಫಲ.

197 ***Arenga obtusifolia*** Mart., Arecaceae; ಕಾಡುತೆಂಗು, ದಡ್ಡಾಲ, ಧೂಢಸೆಲ, ಬೆಟ್ಟತೆಂಗು, ಮಸೂಟಿ.

198 ***A. pinnata*** (Wurmb) Merr., Arecaceae; ಸೀಗೊಅಕ್ಕಿಮರ.

199 ***Argemone mexicana*** L., Papaveraceae; ಅರಿಶಿನ ಕಮ್ಮಟ ಗಿಡ, ಅರಿಶಿನ ಉಮ್ಮತ್ತಿ, ಅರಿಶಿನ ದತ್ತುರಿ, ಗೊಳಗೊಳಿಕೆ, ಚಿಕ್ಕಣಿಕೆ, ದತ್ತುರಿ, ಬಲರಕ್ಕಸ, ಮುಳ್ಳುದತ್ತೂರಿ.

200 ***Argyreia cuneata*** Ker Gawl., Convolvulaceae; ಅಚಾರಿಗಿಡ, ಅಚ್ಚೆಗಿಡ, ಕಳ್ಳನಗಿಡ, ಕಳ್ಳನಮೆಳೆ, ಕಳ್ಳನಹಂಬು, ಕಾಲಕುಕನಗಿಡ, ನೆಟ್ಟರುಳು, ನೆತ್ತರುಹೂ.

201 ***A. elliptica*** Arn. ex Choisy, Convolvulaceae; ಉಗನಿಬಳ್ಳಿ, ಉಗನಿಹಂಬು, ಉಗ್ರಿಬಳ್ಳಿ.

202 ***A. imbricata*** Santapau & V.Patel, Convolvulaceae; ಜಾಜುಗಾರನ ಹಂಬು.

203 ***A. malabarica*** Arn. ex Choisy, Convolvulaceae; ಕುದುರೆಬಳ್ಳಿ, ಮಾಸೂಟ, ಮೊಸುಟಿ.

204 ***A. nervosa*** (Burm. f.) Bojer, Convolvulaceae; ಚಂದ್ರಪಾದ, ಜುಂಗ, ಬೋಡತರ, ಸಮುದ್ರಪಾಲ, ಸಮುದ್ರಬಳ್ಳಿ, ಸಮುದ್ರಹಾಲುಬಳ್ಳಿ, ಸಮುದ್ರಹಾಲೆ.

205 ***A. sericea*** Dalzell, Convolvulaceae; ಎಮ್ಮೆಬಳ್ಳಿ

206 ***Arisaema tortuosum*** (Wall.) Schott, Araceae; ಅವುಮಾರಿಗಡ್ಡೆ, ಅವುಮ್ರಿಗಡ್ಡೆ, ಕಾಡುಸುವರ್ಣಗಡ್ಡೆ, ಹಾವುಮರಿಗಿಡ.

207 ***Aristida adscensionis*** L., Poaceae; ಕಾಡುನೊಸೆ ಹುಲ್ಲು, ಕಾಡುಸಣ್ಣ ಹಂಚೀಹುಲ್ಲು, ಬಂಡೀಊಬಿನಹುಲ್ಲು.

208 ***A. funiculata*** Trin. & Rupr., Poaceae; ತ್ರಿಶೂಲ ಊಬಿನಹುಲ್ಲು.

209 ***A. hystrix*** L.f., Poaceae; ಬಿಳಿವುನುಗದ ಹುಲ್ಲು.

210 ***A. setacea*** Retz., Poaceae; ದೊಡ್ಡಹಂಚೀಹುಲ್ಲು, ನಾಯಿಹಂಚಿ ಹುಲ್ಲು, ಹಲ್ಲುಚುಚ್ಚೊಹುಲ್ಲು.

211 ***Aristolochia bracteolata*** Lam., Aristolochiaceae; ಆಡುಮುಟ್ಟದಗಿಡ, ಕತ್ತೆಕಿರುಬನಗಿಡ, ಕತ್ತೆಹೊಟ್ಟೆಗಿಡ, ಕಲಗುರಕಿ, ಕೀಟಮಾರಿಗಿಡ, ಕುರಿಗಿಡ, ಸಣ್ಣಜಾಲಿಹುಲ್ಲು, ಸಂಗಲಿಹುಲ್ಲು.

212 ***A. indica*** L., Aristolochiaceae; ಈಶ್ವರೀಬಳ್ಳಿ, ಈಶ್ವರೀಬೇರು, ಕೋಡುಲ, ಗೋಪಾಲಪುಟ್ಟಿ ತೊಪ್ಪಲು, ತಕ್ಕಡಿಬೀಳು, ತೊಪ್ಪಲು, ಸಾಪ್ಸಿ.

213 ***Artabotrys hexapetalus*** (L.f.) Bhandari, Annonaceae; Cupid's plant; ಕಂತಾಳ ಸಂಪಿಗೆ, ಕಂದಾಳಸಂಪಿಗೆ, ಮದನಮಸ್ತಿಹೂ, ಮದನ ಮಂಜರಿಹೂ, ಮನೋರಂಜನಿಹೂ.

214 ***A. odoratissimus*** R.Br. see ***Artabotrys hexapetalus*** (L.f.) Bhandari

215 ***Artanema longifolium*** (L.) Vatke, Linderniaceae; ನೀರ್ಮುಳ್ಳಿ.

216 ***A. sesamoides*** (Vahl) Benth. see ***Artanema longifolium*** (L.) Vatke

217 ***Artemisia absinthium*** L., Compositae; wormseed; ಉರುವಲು, ಮಾಚಿಪತ್ರಿ.

218 ***A. maritima*** L., Compositae; ಜಠರಕ್ರಿಮಿನಾಶಿನಿ, ಶೀರೆ ಹುಳುವಿನ ಮದ್ದು, ಸ್ಯಾಂಟೊನಿನ್.

219 ***A. pallens*** Wall. ex DC., Compositae; ಮಂಜಿಪತ್ರಿ.

220 ***A. sieversiana*** Ehrh., Compositae; ಕಾಡುದವನ, ಜವನ, ದಮನಕ.

221 ***A. vulgaris*** L., Compositae; ಕಾಡುಮಂಜಿಪತ್ರಿ. ನಾಗಮೆಟ್ಟ.

222 ***Arthraxon hispidus*** (Thunb.) Makino, Loranthaceae; ನೆಲಬಿದರಹುಲ್ಲು,

223 ***A. quartinianus*** (A.Rich.) Nash see ***Arthraxon hispidus*** (Thunb.) Makino

224 ***Arthrocnemum indicum*** (Willd.) Moq. see ***Halosarcia indica*** (Willd.) Paul G.Wilson

225 ***Artocarpus altilis*** (Parkinson ex F.A.Zorn) Fosberg, Moraceae; ಗುಜ್ಜುಹಲಸು, ದೀವಿಹಲಸು, ರೊಟ್ಟಿಹಲಸು, ಸೀಮೆಹಲಸು.

226 ***A. heterophyllus*** Lam., Moraceae; ಕಂಟಕಫಲ, ಕೂವಿ, ಕೊಜ್ಜೆ, ಜಾಕ, ತೊಗೆ, ಪನಸ, ಪೆಲ, ಪೇಜ, ಬೊಕ್ಕೆಗಿಡ, ಹಲಸು, ಹಲಸಿನಹಣ್ಣು.

227 ***A. hirsutus*** Lam., Moraceae; Wild Jack; ಐನಿ, ಕಬ್‌ಹಲಸು, ಕಾಟ್ಪನಸ, ಕಾಡ್‌ಗಂಧ, ಪುಗ್ಗುಹಲಸು, ಹೆಚ್ಚುವ, ಹೆಬ್ಬುಹಲಸು

228 ***A. incisus*** (Thunb.) L.f. see ***Artocarpus altilis*** (Parkinson ex F.A.Zorn) Fosberg

229 ***A. lacucha*** Buch.-Ham., Moraceae; ಅಂಜಣ್ಣು, ಕಂಚಿಸಿಂಬು, ಲಿಕುಚಹಣ್ಣು, ವಾಟೆಹುಳಿ.

230 ***A. lakoocha*** Roxb. see ***Artocarpus lacucha*** Buch.-Ham.

231 ***Arundinella setosa*** Trin., Poaceae; ಮರಗತಟ್ಟು ಹುಲ್ಲು, ಹಕ್ಕಿವಾರ್ಜಿ ಹುಲ್ಲು,

232 ***Arundo donax*** L., Poaceae; Greater read; ಲಾಳಚಕಖ್ಡಿ, ಹುಳುಗಿಲು ಹುಲ್ಲು.

233 ***Asclepias curassavica*** L., Apocynaceae; ಕಾಕತುಂಡಿ, ಕಿರಿಯಕಾಗೆತೊಂಡೆ.

234 ***Asparagus adscendens*** Roxb., Asparagaceae; nu

235 ***A. falcatus*** L., Asparagaceae; ಆಷಾಢಿಬೇರು, ಆಹೇರುಬಳ್ಳಿ, ಶೀಬಾರಿ ಬೇರು, ಷಹಾವಲಿ.

236 ***A. gonoclados*** Baker, Asparagaceae;nu

237 ***A. racemosus*** Willd., Asparagaceae; ಆಷಾಡಿಬಳ್ಳಿ, ಜತ್ತಿಗೆಬೇರು, ಜಯಿಬೇರು, ಟಂಡಾಂಗಿ, ನಾರಾಯಣಿ, ವುದುರಿಚಿರು, ಶತಮೂಲಿ, ಶಹವಾಲಿಬಳ್ಳಿ, ಸತವರಿ, ಸೀತೆಚವರಿ, ಸೀಪಾರಿಬೇರು, ಹಲವು ಮಕ್ಕಳತಾಯಿ, ಹಲವುಮಕ್ಕಳ ಬಳ್ಳಿ.

238 ***Asplenium trichomanes*** L., Aspleniaceae; ನವಿಲುಕುಚ್ಚು..

239 ***Asteracantha longifolia*** Nees see ***Hygrophila auriculata*** (Schumach.) Heine

240 ***Asteriastigma macrocarpa*** Bedd. see ***Hydnocarpus macrocarpa*** Warb.

241 ***Asystasia gangetica*** (L.) T.Anderson, Acanthaceae; ಮದ್ದೆಸೊಪ್ಪು, ಲವಂಗವಲ್ಲಿ.

242 ***Atalantia monophylla*** DC., Rutaceae; ಅಡವಿ ನಿಂಬೆ, ಕಂಚಿಲೆ, ಕಾಕಕಂಚಿ, ಕಾಕಂಚೀಬಳ್ಳಿ, ಕೈಪೆರಪುಳಿ, ದೊಡ್ಡಿಹುಳಿ.

243 ***A. racemosa*** Wight ex Hook., Rutaceae; ಹುಚ್ಚುನಿಂಬೆ.

244 ***Atriplex hortensis*** L., Amaranthaceae; ಚಕ್ವಾತ, ಚಕ್ಕೋತನಸೊಪ್ಪು.

245 ***Atropa acuminata*** Royle ex Lindl., Solanaceae; ನಾಟಿಬೆಲ್ಲೊನ.

246 ***A. belladonna*** L., Solanaceae; ಸೀಮೆಬೆಲ್ಲೊನ.

247 ***Atylosia albicans*** (Wight & Arn.) Benth. see ***Cajanus albicans*** (Wight & Arn.) Maesen

248 ***A. goensis*** (Dalzell) Dalzell see ***Cajanus goensis*** Dalzell

249 ***A. lineata*** Wight & Arn. see ***Cajanus lineatus*** (Wight & Arn.) Maesen

250 ***A. sericea*** Benth. ex Baker f., Leguminosae; ಅಡವಿತೊಗರಿ.

251 ***Aucklandia lappa*** DC., Compositae; ಕೋಷ್ಠ, ಕೋಸ್ಟ.

252 ***Avena byzantina*** K.Koch, Poaceae; Indian oats; ಓಟ್ಸ್, ತೋಕೆಗೋಧಿ.

253 ***A. fatua*** L., Poaceae; ಕಾಡುತೋಕೆಗೋಧಿ.

254 ***A. sativa*** L., Poaceae; ಸೀಮೆ ಓಟ್ಸ್, ಸೀಮೆತೋಕೆಗೋಧಿ.

255 ***Averrhoa bilimbi*** L., Oxalidaceae; Tree sorrel; ಬಿಳಿಂಬಿ, ಬಿಂಬ್ಲಿ.

256 ***A. carambola*** L., Oxalidaceae; ಕಮರಾಕ್ ಮರ, ಕಮರಾಕ್ಷಿಹಣ್ಣು, ಕಮರಂಗ, ಕಮ್ರಾಕ್, ಕಿರಿನುಲ್ಲಿ ಕೊಬರಿಕಾಯಿ.

257 ***Avicennia officinalis*** L., Acanthaceae; ಉಪ್ಪಾತಿ, ಉಪ್ಪುಂಜಿಗಿಡ, ಕಾಂದಲ್, ಮದ.

258 ***Ayapana triplinervis*** (Vahl) R.M.King & H.Rob., Compositae; ಅಯ್ಯಪಾನ

259 ***Azadirachta indica*** A.Juss., Meliaceae; ಒಳ್ಳೆಬೇವು, ಕಹಿಬೇವು, ಕಹಿನಿಂಬೆಮರ, ಕರಿಬೇವು, ಬೇವು.

260 ***Azanza lampas*** (Cav.) Alef. see ***Thespesia lampas*** (Cav.) Dalzell

261 ***Azima tetracantha*** Lam., Salvadoraceae; ಇಜಂಗು, ಉಪ್ಪುಗೋಜೆ, ಎಗಚಿ, ಎಸಗಳೆಮೋಟು, ಬಿಳಿ ಉಪ್ಪಿಗಿಡ, ಸಕಪತ, ಹಲ್ಲುಸುಂಡೆ.

# B

262 ***Baccaurea courtallensis*** (Wight) Müll.Arg., Phyllanthaceae; ಕೋಡಿಚುಕ್ಕೆ, ಕೋಳಿಕುಕ್ಕೆ.

263 ***Bacopa monnieri*** (L.) Wettst., Plantaginaceae; ಕಿರಿಬ್ರಾಹ್ಮಿ, ನೀರುಬ್ರಾಹ್ಮಿ, ನೀರ್ ಉಪ್ಪಿಗಿಡ.

264 ***Balanites aegyptiaca*** (L.) Delile, Zygophyllaceae; ಇಂಗಳದಮರ, ಇಂಗಳರಾಡ, ಇಂಗಳೀಕ, ಇಂಗುದಿ, ಮೀನುಮರ, ಸೊಕ್ಕಿನಗಿಡ, ಹಿಂಗಕಾಟ, ಹಿಂಗಳೋರು.

265 ***Baliospermum montanum*** (Willd.) Müll.Arg. see ***Baliospermum solanifolium*** (Burm.) Suresh

266 ***B. solanifolium*** (Burm.) Suresh, Euphorbiaceae; ಕಾಡುಹರಳು, ದಂತಿ, ನಾಗದಂತಿ.

267 ***Bambusa arundinacea*** Willd. see ***Bambusa bambos*** (L.) Voss

268 ***B. bambos*** (L.) Voss, Poaceae; Thorny bamboo; ಅಂಡೆಬಿದಿರು, ಕನೀರ, ಕಲಾಲೆ, ಕಿರುಬಿದಿರು,ಗಳು, ಗಳೆ, ಡೋಂಗಿ, ಬಿದಿರಿನಗಳ, ಬಿದಿರಿನ ಮೆಳೆ, ಬಿದಿರು, ಹೆಣ್ಣುಬಿದಿರು, ಹೆಬ್ಬಿದಿರು.

269 ***B. vulgaris*** Schrad., Poaceae; Golden Bamboo; ಡವಿಕೆ, ಬಣ್ಣದಬಿದಿರು, ಹಳದಿಬಿದಿರು.

270 ***Barleria buxifolia*** L., Acanthaceae; ಕರೀಚುಳ್ಳಿ, ಕೃಷ್ಣಚೋರ, ಗುಬ್ಬಿಮುಳ್ಳು, ಗಂಡುಕೊಟ್ಟಿಮುಳ್ಳು, ಚುಳ್ಳಿ.

271 ***B. cristata*** L., Acanthaceae; ಕಿಂಕಿರಾತ, ಕುರುವಕ, ಝುಂಟಿ, ಪಟಿಕದ ಹೂ, ಸ್ಫಟಿಕದ ಹೂ.

272 ***B. gibsonii*** Dalzell, Acanthaceae; ಕೋವೆಮುಳ್ಳು, ಗುರ, ನೀರು ಉಪ್ಪಿಗಿಡ, ಮುಳ್ಳುಅಂಕೋಲೆ.

273 ***B. lawii*** T.Anderson, Acanthaceae; ಕೆನೆಕೊಟ್ಟಿ ಮುಳ್ಳು, ಕೆನೆಗೊರಟಮುಳ್ಳು.

274 ***B. mysorensis*** B.Heyne ex Roth, Acanthaceae; ಕಾಡುಸುಲ್ಲಿ, ಚುಳ್ಳಿಮುಳ್ಳಿ.

275 ***B. prionitis*** L., Acanthaceae; ಕುರಂಟಿ, ಕುರಂಟಕೆ, ಗೊಟ್ಲೆ ಹೂ, ಗೊರಟೆ, ಮುಳ್ಳುಗೊರಟೆ, ಮುಳ್ಳುಮದರಂಗಿ, ಸೆಮ್ಮುಳ್ಳಿ.

276 ***Barringtonia acutangula*** (L.) Gaertn., Lecythidaceae; ಕೆಂಪುಕಣಗಿಲೆ, ಗಣಿಗಲು, ಗಣಗಲು ತೋರ, ಧಾತ್ರಿಫಲ, ನೀರುಗಣಿಗಲು, ಹೊಳೆಕೊವ್ವ.

277 ***B. asiatica*** (L.) Kurz, Lecythidaceae; ಸಮುದ್ರಫಲ.

278 ***B. racemosa*** (L.) Spreng., Lecythidaceae; ಕಣಗಿಲತೋರ, ಕನಗಿನತೋರ, ನೀರುಗನಗಿಲೆ, ನೀವಾರ.

279 ***Basella alba*** L., Basellaceae; Indian spinach; ಕೆಂಪುಬಸಳೆ, ಕೆಂಪುಬಾಯಿಬಸಳೆ, ದೊಡ್ಡಬಸಳೆ, ಪೋತಕಿ, ಬಾಯಿಬಸಳೆ, ಬಿಳೀಬಸಳೆ, ಮಂದಕಾಲಿ, ಹಿರೀಬಸಳೆ.

280 ***B. rubra*** L. see ***Basella alba*** L.

281 ***Bassia butyracea*** Roxb. see ***Diploknema butyracea*** (Roxb.) H.J.Lam

282 ***Bauhinia acuminata*** L., Leguminosae; ಐಂರುಷ, ಪೂಜ ಮಂದಾರ, ಬಿಳಿಕಂಚುವಾಳ, ಬಿಳಿಮಂದಾರ.

283 ***B. diphylla*** Buch.-Ham., Leguminosae; ಕಡಕೋಲು.

284 ***B. divaricata*** L., Leguminosae; ಗೊಡ್ಡುಯಾದೆ.

285 ***B. malabarica*** Roxb., Leguminosae; ಕೊಗ್ಗೆಪುಕ್ಕ, ಚಿಪ್ಪುರು, ನಿಂಪಿಡಿ, ನಿಂಬೆಡ, ನಿಂಪುಳಿ, ಬಸವನಪಾದ, ಹುಳಿಆಚಲು.

286 ***B. phoenicea*** Wight & Arn., Leguminosae; ಕೆಂಪುಯಾತಬಳ್ಳಿ, ಕೆಂಬಟ್ಟುಬಳ್ಳಿ.

287 ***B. purpurea*** L., Leguminosae; ಉಲಿಪೆ, ಕಂಚಿವಾಳ, ಕೆಂಪು ಕಂಚಿವಾಳ, ಕೆಂಪುಮಂದಾರ, ರಕ್ತಮಂದಾರ, ಸರುಳ್.

288 ***B. racemosa*** Lam., Leguminosae; ಅರಗಿಂದ, ಅರಳು, ಕಾಡುಮಂದಾರ, ಅರಿಸಿಲೆ, ಅರಿಸೆ, ಆಪಟ, ಆರ್ತಿ, ಐಯುಟ, ಐಷೆ, ಕಿತ್ತಿರಸ, ಚಿಟಾಚಿ, ಝಿಂಗಿಜಿ, ಬನ್ನೆ.

289 ***B. retusa*** Ham. see *Bauhinia divaricata* L.

290 ***B. tomentosa*** L., Leguminosae; ಆನೆಪಾದ, ಕರನಾಪು, ಕಾಡತ್ತಿ, ಕಾಡುಮಂದಾರ, ವನಸಂಪಿಗೆ.

291 ***B. variegata*** L., Leguminosae; ಅರಿಸಿನತೇಗೆ, ಇರ್ಕುಂಬ ಲಿಟು, ಉಟಪೂ, ಉಲಿಪ್ಪ, ಕಾಂಚನರ, ಕಂಜಿವಾಳ, ಕೆಂಪು ಕಂಜಿವಾಳ, ಕೊಂಡಾಲ್ಕ, ಕೋವಿದಾರ, ಪುಲಿಕೋಗೆಲೆ, ಝಿಂಗೇರು, ಕೋಗೆಲೆಪುಕ್ಕೆ, ಮಂದಾರ.

292 ***Beaumontia grandiflora*** Wall., Apocynaceae; ಗುಲ್ಮಂಜರಿ.

293 ***Begonia*** sp., Begoniaceae; ಆನೆಕಿವಿ ಹೂ.

294 ***Beilschmiedia roxburghiana*** Nees, Lauraceae; ಕಾಮಟ್ಟಿ.

295 ***Belamcanda chinensis*** (L.) DC. see *Iris domestica* (L.) Goldblatt & Mabb.

296 ***Benkara malabarica*** (Lam.) Tirveng., Rubiaceae; ಬಿಳಿಕಾರೆ ಮುಳ್ಳು, ಸಣ್ಣಕಾರೆ.

297 ***Bentinckia condapanna*** Berry ex Roxb., Arecaceae; ಬೆಟ್ಟದಾಳೆ.

298 ***Berberis aristata*** DC., Berberidaceae; Tree turmeric; ಗಂಟರಿಷಣ, ಮೊಪ್ಪಿವಲ್ಲಿ, ಬಾಗಿಸೂತ್ರ.

299 ***B. coriacea*** A.St.-Hil., Berberidaceae; ಕಾಷ್ಮಲ.

300 ***B. leschenaultii*** Wall. ex Wight & Arn., Berberidaceae; ತಾರಿಕೆ, ಮುಳ್ಳಿಕಾದಂಟು.

301 ***B. lycium*** Royle, Berberidaceae; ಮರಹಳದಿ.

302 ***Bergenia ligulata*** Engl. see ***Bergenia pacumbis*** (Buch. Ham. ex D.Don) C.Y.Wu & J.T.Pan

303 ***B. pacumbis*** (Buch.-Ham. ex D. Don) C.Y. Wu & J.T. Pan, Saxifragaceae; ಪಾಷಾಣ, ಪಾಷಾಣಬೇರು.

304 ***Bergia ammannioides*** Roxb. ex Roth, Elatinaceae; Water fire wort; ನಂದಿಕಲ್ಲುಸೊಪ್ಪು.

305 ***Berrya cordifolia*** (Willd.) Burret, Malvaceae; ತ್ರಿಂಕೊಮಾಲಿ ಮರ, ಸರಳದೇವದಾರು.

306 ***Beta vulgaris*** L., Amaranthaceae; Beetroot; ಬೀಟ್‌ರೂಟ್.

307 ***Betula utilis*** D.Don, Betulaceae; ಭೋಜಪತ್ರೆ.

308 ***Bignonia quadrilocularis*** Roxb. see ***Heterophragma quadriloculare*** (Roxb.) K.Schum.

309 ***Biophytum sensitivum*** (L.) DC., Oxalidaceae; ಜಲಪುಷ್ಪಕ, ಹೊರಮಚ್ಚಕ, ಹೊರಮುನಿ.

310 ***Bischofia javanica*** Blume, Phyllanthaceae; ಗೊಬ್ರನೇರಳೆ, ಗೋಪರಿಂಗ ಮುಳ್ಳು, ಗೋವರ್‌ನೆಲ್ಲು, ನಾಯುರಲ್, ನಿಗುರುಲ್ಲೆ, ನೀಲಿಮರ, ನುಗಲ್ಲು, ನೆಲ್ಲಿಮರ.

311 ***Bixa orellana*** L., Bixaceae; Annatto; ಅರ್ನ್ನಾಟ್ಟು, ಕಪ್ಪುಮಂಕಾಲಿ, ಕೇಸರಿರಂಗು, ಚಯಲಿತ, ಜಾಫ್ರ, ಜಾಫ್ರೇಡು, ಬಂಗಾರಕಾಯಿ, ರುಡ್ಡಗಿಡ, ರಂಗುಗಿಡ, ರಂಗುಮಾಲಾರ್, ಸಂಜೆಬಾಳೆ.

312 ***Blepharis edulis*** (Forssk.) Pers., Acanthaceae; ಉಟಂಗಣ, ಸೂಚಿಪತ್ರ.

313 ***B. maderaspatensis*** (L.) B.Heyne ex Roth, Acanthaceae; ಕೂಡಲಿಸೊಪ್ಪು.

314 ***Blepharispermum subsessile*** DC., Compositae; ನಾಮಬಂಟ.

315 ***Blumea axillaris*** (Lam.) DC., Compositae; ಗಬ್ಬುಸೊಪ್ಪು.

316 ***B. balsamifera*** (L.) DC., Compositae; ಕುಕುರಾದ್ರ.

317 ***B. lacera*** (Burm.f.) DC., Compositae; ಗಂಧಾರಿಗಿಡ, ಸಾಂಬ್ರಾಣಿ ಗಿಡ.

318 ***B. mollis*** (D.Don) Merr. see ***Blumea axillaris*** (Lam.) DC.

319 ***Blyxa echinosperma*** (C.B.Clarke) Hook.f., Hydrocharitaceae; ಜಲಶೂಲಕ, ಪಾಸಿ.

320 ***Boehmeria nivea*** (L.) Gaudich., Urticaceae; Ramie fibre; ಕಿತ್ತಾನಾರು.

321 ***Boerhavia chinensis*** (L.) Rottb., Nyctaginaceae; ಬೆಕ್ಕಿನಹೆಜ್ಜೆಬಳ್ಳಿ, ರಕ್ತಪುನರ್ನವ.

322 ***B. diffusa*** L., Nyctaginaceae; Hog weed; ಅಡಕುಪುಟ್ಟಿನ ಗಿಡ, ಅಡತಿಮಾಮಿಡಿ, ಕೊಮ್ಮೆಗಿಡ, ಗನಜಲಿ, ಗಾಯಿಮೋರೆ, ತೊಪ್ಪಲು, ಗೊನಜಾಲಿ, ನಡುಮುರುಕನಬಳ್ಳಿ, ಬಲವಡಿಕೆ, ಶನಾಟ, ಸನಾದಿಕ.

323 ***B. plumbaginea*** Cav., Nyctaginaceae; ಮದಿನಿಕ.

324 ***B. verticillata*** Poir. see *Boerhavia plumbaginea* Cav.

325 ***Bombax ceiba*** L., Malvaceae; ಅಗಿಗಯ್, ಅಪೂರಣಿ, ಆಲ, ಇಲವು, ಎಲವು, ಕೆಂಪುಬೂರುಗ, ದೂದಿಲೆ, ಪಚ್ಚೆಲೆ, ಪಿಷ್ಪೆಲೆ, ಪುಲ, ಬುರ್ಲ, ಬೂರಲ, ಬೂರಗ, ಮರಹತ್ತಿ, ಮುಳ್ಳುಬೂರಗ, ಮುಳ್ಳೆಲವು, ಯಲವಡ, ಶಾಲ್ಮಲಿ, ಸಾಲ್ಮಲಿ, ಸಾವರ, ಸೀಮುಲ, ಸೌರಿ.

326 ***B. malabaricum*** DC. see *Bombax ceiba* L.

327 ***Borassus flabellifer*** L., Arecaceae; Palmyrapalm, ಓಲೆ, ಓಲೆಯಗರಿ, ಕರಿತಾಳೆ, ತೃಣರಾಜ ತಾಟೆನಿಂಗುಮರ, ತಾಳ, ತಾಳಿ.

328 ***Borreria articularis*** (L.f.) F.N.Williams see *Spermacoce articularis* L.f.

329 ***Boswellia serrata*** Roxb. ex Colebr., Burseraceae; ಆನೆಬ್ಯಾಲ, ಇಡಬೋಲ, ಕುನ್ದುರು, ಚಿಟ್ಟುಂಬೆ, ಚಿತ್ತ, ಚಿತ್ತು, ಚಿಲಕಡಿ, ಚಿಲಕದೂಪ, ತಡಕು, ತಲ್ಲಕಿ, ತಾರಿಕ, ತುರುಷ್ಕ, ಮಾದಿ, ಮುಕುಂದ, ಸೀತಮ್ಮ, ಸೀತೆ, ಸುರಭಿ.

330 ***Bothriochloa bladhii*** (Retz.) S.T.Blake, Poaceae; ಜೇನುಕಡ್ಡಿ, ತುರಿಕಡ್ಡಿ.

331 ***B. intermedia*** (R.Br.) A.Camus see ***Bothriochloa bladhii*** (Retz.) S.T.Blake

332 ***B. pertusa*** (L.) A.Camus, Poaceae; ಅನಕಟ್ಟುಹುಲ್ಲು, ಕರಡಾಕಾಸಿ ಹುಲ್ಲು, ಚಿಕ್ಕಕಾರೆಹುಲ್ಲು, ಹೆಣ್ಣುಗಂಜಳಗರಿಕೆ ಹುಲ್ಲು.

333 ***Bougainvillea glabra*** Choisy, Nyctaginaceae; ಕಾಗದದ ಹೂಗಿಡ, ಕೆಂಪುತುರಾಯಿಮರ, ಬೋಗನ್‌ವಿಲ್ಲಗಿಡ.

334 ***Brachiaria distachya*** (L.) Stapf, Poaceae; ಪೊರೆಹುಲ್ಲು, ಹಂಚಿಹಾರಕಹುಲ್ಲು.

335 ***B. eruciformis*** (Sm.) Griseb., Poaceae; ಅಂಟುಗರಿಕೆ ಹುಲ್ಲು.

336 ***B. mutica*** (Forssk.) Stapf, Poaceae; Buffalo grass, Mauritius grass, Scutch grass, Water grass; ಎಮ್ಮೆಹುಲ್ಲು, ನೀರುಹುಲ್ಲು, ಪಾರಹುಲ್ಲು, ಮಾರಿಷಸ್‌ಹುಲ್ಲು.

337 ***B. ramosa*** (L.) Stapf, Poaceae; ಕಾಡುಬರಗುಹುಲ್ಲು, ಬೆಣ್ಣೆಅಕ್ಕಿಹುಲ್ಲು.

338 ***B. reptans*** (L.) C.A.Gardner & C.E. Hubb., Poaceae; ಎಮ್ಮೆತಪ್ಪರೆ ಹುಲ್ಲು,ಸಣ್ಣ ಕಾಡು ಬಿಳಿ ಸಾಮೆಹುಲ್ಲು.

339 ***B. semiverticillata*** (Rottler) Alston, Poaceae; ತಪ್ಪರಿಕೆಹುಲ್ಲು, ಮಂಜುಹುಲ್ಲು.

340 ***Bragantia wallichii*** R.Br. ex Duchart, Aristolochiaceae; ಚಕ್ರಾಣಿಕೆ, ನೀರುವಾಟೆ, ಮಿರ್ಲಾಗ್ನಿ.

341 ***Brassica alba*** Boiss. see ***Brassica oleracea*** L.

342 ***B. campestris*** L. see ***Brassica rapa*** L.

343 ***B. juncea*** (L.) Czern., Brassicaceae; ಕೆಂಪುಸಾಸಿವೆ, ಸಾಸುಮೆ, ಸಾಸುವೆ.

344 ***B. nigra*** (L.) K.Koch, Brassicaceae; Black mustard, True mustard; ಕಪ್ಪುಸಾಸುವೆ, ಕರಿಸಾಸುವೆ, ವಗ್ಗರಣೆ ಸಾಸುವೆ.

345 ***B. oleracea*** L., Brassicaceae; ಬಿಳಿಸಾಸಿವೆ.

346 ***B. oleracea*** var. ***botrytis*** L., Brassicaceae; Cauliflower; ಕಾಲಿಫ್ಲವರ್, ಗೋಬಿ, ಹೂಕೋಸು.

347 ***B. oleracea*** var. ***capitata*** L., Brassicaceae; ಎಲೆಕೋಸು, ಕ್ಯಾಬೇಜ್, ಕೋಸು, ಮುದ್ದೆಕೋಸು.

348 ***B. oleracea*** var. ***gongylodes*** L., Brassicaceae; Knolkhol; ನವಿಲ್‌ಕೋಲ್, ನವಿಲ್‌ಕೋಸು.

349 ***B. rapa*** L., Brassicaceae; ಸಾಸಿವೆ ಎಣ್ಣೆ ಬೀಜ, ಹಳದಿಸಾಸಿವೆ.

350 ***Breynia retusa*** (Dennst.) Alston, Phyllanthaceae; ಕಾಂಬೋಜಿ.

351 ***B. rhamnoides*** Mull.Arg. see ***Breynia vitis-idaea*** (Burm.f.) C.E.C.Fisch.

352 ***B. vitis-idaea*** (Burm.f.) C.E.C.Fisch., Phyllanthaceae; ಅನ್ನೋಲೆ, ಆನ್ನೋಲೆ, ಕರೆಹೂಲಿ, ಕೆಂಪುಹುಳಿ, ಗಂಡಪಚ್ಚಾರಿ, ಬಾಮರಿ, ಬಿಳಿಸೂಲಿಗೆ, ಹೂಲಿ.

353 ***Bridelia montana*** (Roxb.) Willd., Phyllanthaceae; ಏಕವೀರ, ಕಿಟ್ಟೊ, ಕೊಟ್ಟೆ, ಕೋಟೆ, ಬಂಧ, ಸಿಡಿಗುಲಿಗೆ.

354 ***B. retusa*** (L.) A.Juss., Phyllanthaceae; ಆಸನ, ಕೊಯ್ಯ ಮುಂಚಿ, ಕೋಗ್ಯಮುಂಚಿ, ಕೋಮಂಚಿ, ಗರಿಗೆ, ಗುಜ್ಜು, ಗೋಜು, ನಸ್ಮಗಂಧ, ನಸಿನಗೆ, ನಸುನಗಂಧ, ಫತ್ತರ್‌ಪೋಡಿ, ಮಗುವ, ಮುಳ್ಳಾನೆ, ಮುಳ್ಳುಗುಂಜೆ, ಮುಳ್ಳುಬೆಂಗ, ಮುಳ್ಳುಹೊನ್ನೆ, ಹೂವುಗಂಧ.

355 ***B. stipularis*** (L.) Blume, Phyllanthaceae; ಅಕ್ಷತೆಬಳ್ಳಿ, ಬಿಸಿಲಬಳ್ಳಿ, ಶಿರಿಅನ್ನೆಂ, ಸಿರಿಅನ್ನೆಂ.

356 ***Broussonetia papyrifera*** (L.) L'Hér. ex Vent., Moraceae; ಕಾಗದದ ಉಪ್ಪುನೇರಿಳೆ.

357 ***Brucea amarissima*** Desv. ex Gomes see *Brucea javanica* (L.) Merr.

358 ***B. javanica*** (L.) Merr., Simaroubaceae; ಕಪತುಗೆಡ್ಡಿ, ಭಾರಂಗಿ.

359 ***Bruguiera conjugata*** (L.) Merr. see ***Bruguiera gymnorhiza*** (L.) Lam.

360 ***B. gymnorhiza*** (L.) Lam., Combretaceae; ಕೊಳಚೆಗಿಡ, ಯುಪ್ಪಟ.

361 ***Bryophyllum pinnatum*** (Lam.) Oken, Crassulaceae; ಕಾಡುಬಸಳೆ, ನಾಯಿಪತ, ಗಂಡುಕಾಳಿಂಗ.

362 ***Buchanania angustifolia*** Roxb. see ***Buchanania axillaris*** (Desr.) Ramamoorthy

363 ***B. axillaris*** (Desr.) Ramamoorthy, Anacardiaceae; ಎಮ್ಮೆಮುರುಕಲು ಗಿಡ, ನುರ್ಕಲ್, ಮುರ್ಕ್ಕಾಲು, ಮೊರಡಿ, ಮೊರವೆ, ಶಾರಪಪ್ಪು.

364 ***B. cochinchinensis*** (Lour.) M.R.Almeida, Anacardiaceae; Cuddappah almond; ಇರಪ್ಪು, ಇರ್ವ, ಎರ್ವ, ಕೊಲಮಾವು, ಕೊಲರ್‌ಗೇರು, ಕೊಲರ್‌ಮಾವು, ಚಲಾಲಿ, ಚಾರಪಪ್ಪು, ಚಿರವುಲಿ, ಧುರ್‌ಕಾಲು, ನುರುಕ್ಕಲ್, ನುಸ್ಕುಲ್, ಪಿಯಾಲ್, ಮೊರಂಟೆ, ಹುಲಿಮರಳು.

365 ***B. lanzan*** Spreng. see ***Buchanania cochinchinensis*** (Lour.) M.R.Almeida

366 ***Buddleja asiatica*** Lour., Scrophulariaceae; ಕರಕಾನೆ.

367 ***Bulbostylis puberula*** Kunth, Cyperaceae; ಚವುರಿಹುಲ್ಲು.

368 ***Bunium bulbocastanum*** L., Apiaceae; ಸೀಮೆಜೀರಿಗೆ.

369 ***Butea frondosa*** Roxb. see ***Butea monosperma*** (Lam.) Taub.

370 ***B. monosperma*** (Lam.) Taub., Leguminosae; ಕಮಟ, ತೋರಾಸ್, ಪಲಸ, ಬ್ರಹ್ಮವೃಕ್ಷ, ಮುತ್ತುಗ, ಮುತ್ತುಗದೆಲೆ, ಮುತ್ತಲಮರ, ಮುತ್ತಲ ಬೀಜ, ಮೊಟ್ಟುಗ.

371 ***B. parviflora*** Roxb. see *Spatholobus parviflorus* (DC.) Kuntze

372 ***B. superba*** Roxb., Leguminosae; ಇಪ್ಪರಾತಿ, ಕೈತಿ, ಮುತ್ತುಗದ ಬಳ್ಳಿ.

# C

373 ***Cadaba fruticosa*** (L.) Druce, Capparaceae; ಕೆಗನಿಗೆ, ಚಾಯಗವಚೆ, ಚೆಗನಿಕೆ, ಮರಗಚೆ, ಮರಗಡೆ, ಮುಗರೆ,ʾ ಷೆಗುರ್ತಿ.

374 ***C. indica*** Lam. see *Cadaba fruticosa* (L.) Druce

375 ***C. trifoliata*** Wight & Arn., Capparaceae; ಬಲಯ.

376 ***Caesalpinia coriaria*** (Jacq.) Willd., Leguminosae; American sumac, dividivi; ಅಲ್ಡೆಕಾಯಿ, ಡಿವಿಡಿವಿ, ವಿಲಾಯತಿ ಸೀಮೆ ಅಲ್ಡೆಕಾಯಿ.

377 ***C. crista*** L., Leguminosae; Bondue nut, Fever nut, Molucca bean, Physic nut; ಕರುಜ, ಕಲ್‌ಮುರುಕ, ಕಾಕಚಿಕ, ಕಿಟ್ಟ, ಕಿರಿಗಜ್ಜುಗ, ಗಜ್ಜಿಗ, ಗಜ್ಜಿಗೆಕಾಯಿ, ಗಜ್ಜಿಗೆಬಳ್ಳಿ, ಗಜ್ಜಿಗೆಮುಳ್ಳು, ಸಣ್ಣಗೆಜ್ಜುಗ, ಕಾಕುಮುಳ್ಳು.

378 ***C. cucullata*** Roxb., Leguminosae; ಮಟ್ಟಸೀಗೆ, ಮುಳ್ಳೋಡು ಬಳ್ಳಿ.

379 ***C. decapetala*** (Roth) Alston, Leguminosae; ಉಂಡ್ಲ, ಉನಲ್ಲ, ಕುರುಟುಗಜ್ಜಿಗ, ಗಸ್ಸಗ, ಹೊಟ್ಟೆಸೀಗೆ, ಹೊನ್ನುಲ್ಲಿ.

380 ***C. jayabo*** M.Gomez, Leguminosae; ಗೆಜ್ಜುಗ, ಹೆಗ್ಗೆಜ್ಜುಗ.

381 ***C. nuga*** (L.) Aiton see ***Caesalpinia crista*** L.

382 ***C. pulcherrima*** (L.) Sw., Leguminosae; Peacock flower; ಈಜಿಮುಳ್ಳು, ಕೆಂಜಿಗೆ, ಕೊಮ್ಮಾರಿ, ಕೊಮ್ಮೆ, ಗನಿಜೆಲೆ, ನಲ್ಲಿಗನೆ, ರತ್ನಗಂಧಿ, ಷೀಮುಳ್ಳು, ಹೊಟಸೀಗೆ.

383 ***C. sappan*** L., Leguminosae; ಚಪ್ಪಂಗ, ಪಟ್ಟಂಗ, ಪತಂಗ, ಪತ್ರಂಗ, ಸಪ್ಪಂಗ.

384 ***Caesulia axillaris*** Roxb., Compositae; ಕೆಂಪುಗೊಬ್ಬಿ

385 ***Cajanus albicans*** (Wight & Arn.) Maesen, Leguminosae; ಗಿಣ್ಣುನೆಲ್ಲವರೆ, ನೆಲ್ಲವರೆ.

386 ***C. cajan*** (L.) Millsp., Leguminosae; Pigeon pea, Redgram, Dal; ಅಥಕಿ, ತೊಗರಿಯುದ್ದು, ತುರುಕುತೊಗರಿ, ತೊಗರಿಬೇಳೆ, ತೊವರಿ, ದಾಲ್, ಬೇಳೆ, ಬ್ಯಾಳಿ.

387 ***C. goensis*** Dalzell, Leguminosae; ಮಾಷಪರ್ಣಿ.

388 ***C. indicus*** Spreng. see ***Cajanus cajan*** (L.) Millsp.

389 ***C. lineatus*** (Wight & Arn.) Maesen, Leguminosae; ಕಾಡುಕಡಲೆ.

390 ***C. sericeus*** (Baker) Maesen see ***Atylosia sericea*** Benth. ex Baker f.

391 ***Calamus pseudotenuis*** Becc., Arecaceae; ಸಣ್ಣಬೆತ್ತ, ಹಾಲುಬೆತ್ತ.

392 ***C. rotang*** L., Arecaceae; ನಾಗಬೆತ್ತ, ಬೆತಸು, ಬೆತ್ತದ ಬಳ್ಳಿ, ಸುರುಳಿ ಬೆತ್ತ, ಹಜ್ಜೆ, ಹಬ್ಬೆ.

